# ಕರ್ನಾಟಕ ಸ್ಕೌಟ್ ಮತ್ತು ಗೈಡ್

# KARNATAKA SCOUT & GUIDE

News Magazine

VOL.3 JANUARY 2003 No. 1




ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ ದಿ. **17-01-03** ರಂದು ಏರ್ಪಡಿಸಿದ್ದ ಜಿಲ್ಲಾ ಕ್ಯಾಂಪೋರಿಯನ್ನು ಕರ್ನಾಟಕ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮಂತ್ರಿಗಳಾದ ಸನ್ಮಾನ್ಯ ಪ್ರೊ|| ಬಿ.ಕೆ. ಚಂದ್ರಶೇಖರ್ ಅವರು ಉದ್ಘಾಟಿಸಿದರು. ಸಮಾರಂಭದಲ್ಲಿ ರೇಷ್ಮೆ ಮತ್ತು ಜವಳಿ ಖಾತೆ ಸಚಿವರಾದ ಸನ್ಮಾನ್ಯ ಶ್ರೀ ಹೆಚ್.ಎಂ. ರೇವಣ್ಣ ಮತ್ತು ಸನ್ಮಾನ್ಯ ಶ್ರೀ ವಿ. ಕೃಷ್ಣಪ್ಪ, ಶಾಸಕರು ದೊಡ್ಡಬಳ್ಳಾಪುರ ಮತ್ತಿತರ ಗಣ್ಯರು ಭಾಗವಹಿಸಿದ್ದರು.

ದಿ. **19-01-03** ರಂದು ನಡೆದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾ ಕ್ಯಾಂಪೋರಿಯ ಸಮಾರೋಪ ಸಮಾರಂಭದಲ್ಲಿ ಮಾತನಾಡುತ್ತಿರುವ ಮಾನ್ಯ ರೇಷ್ಮೆ ಮತ್ತು ಜವಳಿ ಖಾತೆ ಸಚಿವರಾದ ಶ್ರೀ ಹೆಚ್.ಎಂ. ರೇವಣ್ಣನವರು, ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಮಾನ್ಯ ಸಹಕಾರ ಸಚಿವರಾದ ಶ್ರೀ ಹೆಚ್. ವಿಶ್ವನಾಥ್ ಅವರು, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಹಾಗೂ ಸನ್ಮಾನ್ಯ ಶ್ರೀ ಸತ್ಯನಾರಾಯಣಗೌಡ, ಅಧ್ಯಕ್ಷರು, ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿ ಹಾಗೂ ಇತರ ಗಣ್ಯರನ್ನು ಕಾಣಬಹುದು.







ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
೮೫ ವರ್ಷಗಳ ಪರಿಪೂರ್ಣ ಸೇವೆಯಲ್ಲಿ

**1917-2003**


ಪ್ರಕಾಶಕರು : ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



ದಿನಾಂಕ 22.11.2002 ರಂದು ದಾವಣಗೆರೆ ಜಿಲ್ಲಾ ಸ್ಕೌಟ್ ಭವನದ ಆವಾರಣದಲ್ಲಿ ಸಮುದಾಯ ಭವನ ಹಾಗೂ ಆಡಳಿತ ಕಛೇರಿಯ ಶಂಕು ಸ್ಥಾಪನೆಯನ್ನು ರಾಜ್ಯದ ಕ್ರೀಡಾ ಹಾಗೂ ಯುವಜನ ಸೇವಾ ಸಚಿವರಾದ ಸನ್ಮಾನ್ಯ ಶ್ರೀ ಎಸ್.ಎಸ್. ಮಲ್ಲಿಕಾರ್ಜುನ ಇವರು ನೆರವೇರಿಸಿದರು. ಸಭೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜಂಬಿಗಿ ಶರಣಪ್ಪ, ಶ್ರೀಮತಿ ಜಿ.ಎಸ್. ವನಜಾಕ್ಷಮ್ಮ ಜಿಲ್ಲಾ ಗೈಡ್ ಆಯುಕ್ತರು, ಅಧ್ಯಕ್ಷರಾದ ಶ್ರೀ ಅಥಣಿ ಕೊಟ್ರೇಶ್, ಶ್ರೀ ಮಹಮದ್ ವಾಸಿಲ್ ಶ್ರೀ ಕೆ.ಜಿ. ಕುಬೇರಪ್ಪ ಹಾಗೂ ಇತವ ಪಾದಾಧಿಕಾರಿಗಳು ಸಭೆಯಲ್ಲಿ ಹಾಜರಿದ್ದರು.



ಕೊಂಡಜ್ಜಿಯಲ್ಲಿ ಸ್ಕೌಟ್ ಶಿಕ್ಷಕರಿಗಾಗಿ ಇತ್ತೀಚೆಗೆ ನಡೆದ 52ನೇ ಹಿಮಾಲಯ ವುಡ್ ಬ್ಯಾಡ್ಜ್ ತರಬೇತಿಯಲ್ಲಿ ಶಿಬಿರಾರ್ಥಿಗಳು ಹಗ್ಗದ ಸೇತುವೆ ನಿರ್ಮಿಸುತ್ತಿರುವುದು



# ಕರ್ನಾಟಕ ಸ್ಕೌಟ್ ಮತ್ತು ಗೈಡ್
# KARNATAKA SCOUT AND GUIDE


STATE MONTHLY NEWS MAGAZINE

**Vol - 3** **January - 2003** **No.1**




## ಪರಿವಿಡಿ



* Religion without Philosophy runs into Superstition.
* Give every thing and look for no return.
* Knowledge exists, man only discovers it.
* You are good, but be better.

*- Swami Vivekananda*

# ರಾಜ್ಯ ಮುಖ್ಯ ಆಯುಕ್ತರ ನುಡಿ

***ಆತ್ಮೀಯರೇ***

ತಮಗೆಲ್ಲಾ ನೂತನ ವರ್ಷದ ಹಾಗೂ ಸಂಕ್ರಾಂತಿಯ ಶುಭಾಶಯಗಳು. ನೂತನ ಸಂವತ್ಸರ 2003 ಸ್ಕೌಟ್ಸ್-ಗೈಡ್ಸ್‌ಗಳಿಗೆ - ಸಂಸ್ಥೆಯಲ್ಲಿ ನಿಸ್ವಾರ್ಥದಿಂದ ಸೇವೆಸಲ್ಲಿಸುತ್ತಿರುವ ಸಾವಿರಾರು ಕಾರ್ಯಕರ್ತರಿಗೆ - ಸಂಸ್ಥೆಯ ಬೆಳವಣಿಗೆಯಲ್ಲಿ ಸದಾ ನೆರವು ನೀಡುತ್ತಿರುವ ಎಲ್ಲಾ ಸಜ್ಜನರಿಗೆ - ಸೂಕ್ತ ಮಾರ್ಗದರ್ಶನ ನೀಡಿ ನಮ್ಮ ಕಾರ್ಯ ಯೋಜನೆಗಳು ಫಲಪ್ರದವಾಗಿ ನೆರವೇರಲು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ರಾಜ್ಯದ ಎಲ್ಲೆಡೆಗಳಿಂದ ಈಗಾಗಲೇ ಜರುಗಿದ ತರಬೇತಿಗಳ ಹಾಗೂ ಇತರೆ ಚಟುವಟಿಕೆಗಳ ಬಗ್ಗೆ ವರದಿಗಳು ರಾಜ್ಯ ಸಂಸ್ಥೆಗೆ ಬರುತ್ತಲೇ ಇವೆ. ಸ್ವತಂತ್ರ ದಳಗಳನ್ನೊಳಗೊಂಡು, 'ಶಾಲಾ ಘಟಕಗಳು, ಸ್ಥಳೀಯ ಸಂಸ್ಥೆಗಳು - ಜಿಲ್ಲಾ ಸಂಸ್ಥೆಗಳು ಕಾರ್ಯಕ್ರಮವನ್ನು ಹಮ್ಮಿಕೊಂಡು ಸ್ಥಳೀಯ ಸಾರ್ವಜನಿಕರ - ಸಂಘ - ಸಂಸ್ಥೆಗಳ - ಗ್ರಾಮ - ತಾಲ್ಲೂಕು - ಜಿಲ್ಲಾ ಪಂಚಾಯತಿಗಳ ಹಾಗೂ ಪಟ್ಟಣ ಪಂಚಾಯತ್, ಪುರಸಭೆಗಳ ನೆರವು - ಸಹಕಾರದೊಂದಿಗೆ - ವಿದ್ಯಾ ಇಲಾಖೆಯ ಸಂಪೂರ್ಣ ಸಹಯೋಗದೊಂದಿಗೆ ಹಲವಾರು ಕಾರ್ಯಕ್ರಮಗಳು ವರ್ಷವಿಡೀ ನೆರವೇರುತ್ತಲೇ ಇವೆ.

ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು ಅತ್ಯಂತ ಉತ್ಸಾಹದಿಂದ ಸ್ಥಳೀಯ ಅಧಿಕಾರಿಗಳ ಸಾರ್ವಜನಿಕರ ಹಾಗೂ ಶಾಸಕರುಗಳ ನೆರವು ಹಾಗೂ ಆಶೀರ್ವಾದದೊಂದಿಗೆ ರಾಜ್ಯದೆಲ್ಲೆಡೆ ರ್‍ಯಾಲಿ ನಡೆಸಿರುವ ಬಗ್ಗೆಯೂ ಹಾಗೂ ಸರ್ಕಾರದ ಹಲವಾರು ಕಾರ್ಯಕ್ರಮಗಳಲ್ಲಿ ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿರುವ ಬಗ್ಗೆ ವರದಿಗಳು ಬಂದಿವೆ. ಈ ರೀತಿ ಚಳುವಳಿಯು ರಾಜ್ಯದಾದ್ಯಂತ ಬೆಳೆಯುತ್ತಿರುವುದು ಹೆಮ್ಮೆಯ ಸಂಗತಿ. ಸಂಸ್ಥೆಯ ಎಲ್ಲಾ ಸ್ಕೌಟರ್-ಗೈಡರ್‌ಗಳಲ್ಲಿ, ದಳಗಳ, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳ ಹಾಗೂ ಸಾವಿರಾರು ಪದಾಧಿಕಾರಿಗಳು, ಕಾರ್ಯಕರ್ತರಲ್ಲಿ ನನ್ನ ಮನವಿಯೇನೆಂದರೆ, ದಯಮಾಡಿ ತಾವುಗಳು ಹಾಕಿಕೊಂಡಿರುವ ಎಲ್ಲಾ ಕಾರ್ಯಕ್ರಮಗಳನ್ನು ವೈಯುಕ್ತಿಕ ಮುತುವರ್ಜಿ ವಹಿಸಿ ನೆರವೇರಿಸಿ ತಮ್ಮಗಳ ಕಾರ್ಯವ್ಯಾಪ್ತಿಯ ದಳಗಳನ್ನು ನೋಂದಾವಣೆ ಹಾಗೂ ನವೀಕರಣ ಮಾಡುವ ಮೂಲಕ ತಕ್ಷಣ ಕ್ರಮ ಜರುಗಿಸಬೇಕೆಂದು ಕೋರುತ್ತೇನೆ.

ದಿನಾಂಕ 27.12.2002 ರಿಂದ 07.01.2003ರವರೆವಿಗೆ ಥಾಯ್ಲೆಂಡಿನ - ಚೋನ್‌ಬರಿಯಲ್ಲಿ ಅತ್ಯಂತ ಸಂಭ್ರಮ ಸಡಗರ ಹಾಗೂ ಸಂಪೂರ್ಣ ಕಾರ್ಯಚಟುವಟಿಕೆಯಿಂದ ಜರುಗಿದ 20ನೇ ಅಂತರಾಷ್ಟ್ರೀಯ ಸ್ಕೌಟ್ ಜಾಂಬೋರಿಯಲ್ಲಿ ಭಾಗವಹಿಸಿದ ರಾಜ್ಯದ 14 ಪ್ರತಿನಿಧಿಗಳು ಇತ್ತೀಚೆಗೆ ವಾಪಸಾಗಿದ್ದೇವೆ. ಭಾರತದಿಂದ ಜಾಂಬೋರಿಯಲ್ಲಿ 259 ಸ್ಕೌಟ್-ಗೈಡ್‌ಗಳು ಹಾಗೂ ನಾಯಕರುಗಳು ಪ್ರತಿನಿಧಿಸಿದ್ದರು. ಇದವರೆವಿಗೆ ನಡೆದಿರುವ ಎಲ್ಲಾ ಜಾಂಬೋರಿಗಿಂತಲೂ ಅತಿ ದೊಡ್ಡ ಸಂಖ್ಯೆಯಲ್ಲಿ ಭಾರತವನ್ನು ಈ ಜಾಂಬೋರಿಯಲ್ಲಿ ಪ್ರತಿನಿಧಿಸಲಾಗಿತ್ತು. ರಾಜ್ಯ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿರೆಡ್ಡಿ ಹಾಗೂ ಯುವ ತರಬೇತುದಾರ ಶ್ರೀ ಎಂ.ಕೆ. ಖಾನ್, ಎರಡು ಸಬ್ ಕ್ಯಾಂಪ್‌ಗಳಲ್ಲಿ

ಜವಾಬ್ದಾರಿಯುತ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಅದೇ ರೀತಿ ಶ್ರೀ ಆರ್.ಡಿ. ಮೂರ್ತಿ, ಶ್ರೀ ವಿ.ಎ. ಸತ್ಪುತೆ, ಶ್ರೀ ಬಿ.ಎಸ್. ಸಸಾಲಟ್ಟಿ ಕೂಡ ವಿವಿಧ ಕಾರ್ಯಕ್ರಮಗಳಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು. ಗೋಕಾಕಿನ ಶ್ರೀ ಸತ್ಪುತೆ ಪ್ರಂಪಚದ ವಿವಿಧ ಧರ್ಮಗಳ ಬಗ್ಗೆ ಜರುಗಿದ ಕಾರ್ಯಕ್ರಮದಲ್ಲಿ "ಹಿಂದೂ ಧರ್ಮದ" ಬಗ್ಗೆ ವಿಶೇಷ ಉಪನ್ಯಾಸ ನೀಡಿ ಬಂದಂತ ಸ್ಕೌಟ್-ಗೈಡ್‌ಗಳ ಹಾಗೂ ನಾಯಕರುಗಳ ಗಮನ ಸೆಳೆದಿದ್ದಾರೆ. ಇವರುಗಳಿಗೆ ನನ್ನ ಅಭಿನಂದನೆಗಳು. ವಿಶ್ವ ಜಾಂಬೋರಿಯಲ್ಲಿ ಭಾಗವಹಿಸುವ ಅವಕಾಶ ನನಗೆ ದೊರೆತಿದ್ದು ಹೆಮ್ಮೆ ಎನಿಸಿದೆ.

ಥಾಯ್ಲೆಂಡಿನ ಯುವ ರಾಜಕುಮಾರರು ಜಾಂಬೋರಿಯನ್ನು ದಿನಾಂಕ 27.12.2002 ರಂದು ಉದ್ಘಾಟಿಸಿ ಚಳುವಳಿ ಇನ್ನೂ ವ್ಯಾಪಕವಾಗಿ ಬೆಳೆದು ಯುವಶಕ್ತಿಯನ್ನು ಉತ್ತಮ ನಾಗರಿಕರಿಕನ್ನಾಗಿ ಮಾಡುವತ್ತ ಕಾರ್ಯೋನ್ಮುಕ್ರರಾಗಬೇಕೆಂದು ಕರೆ ನೀಡಿದರು. ಥಾಯ್ಲೆಂಡ್ ಸರ್ಕಾರ ಈ ಬೃಹತ್ ವಿಶ್ವ ಜಾಂಜೋರಿಯ ಸಂಘಟನೆಗೆ ಬೇಕಾದ ಎಲ್ಲ ಮೂಲಭೂತ ಸೌಲಭ್ಯಗಳನ್ನು ಬಹು ಅಚ್ಚುಕಟ್ಟಾಗಿ ಹಾಗೂ ಸುವ್ಯವ್ಯಸ್ಥಿತವಾಗಿ ಮಾಡಿದ್ದು, ಪ್ರಪಂಚದ 150 ರಾಷ್ಟ್ರಗಳಿಂದ ಬಂದಿದ್ದ 24,000 ಸ್ಕೌಟ್-ಗೈಡ್‌ಗಳಿಗೆ ಈ ಅಂತರಾಷ್ಟ್ರೀಯ ಜಾಂಬೋರಿಯ ಪರಿಸರ ಹಾಗೂ ದೊರೆತ ಅನುಭವ ಜೀವನ ಪರ್ಯಂತ ಮರೆಯಲಾಗದ ಘಟನೆಯಾಗಿ ಸ್ಮತಿಪಟಲದಲ್ಲಿ ಉಳಿಯುವುದರಲ್ಲಿ ಅನುಮಾನವಿಲ್ಲ. ವಿಶ್ವ ಜಾಂಬೋರಿಗಾಗಿಯೇ ವಿಶೇಷವಾಗಿ ನಿರ್ಮಿಸಲಾಗಿದ್ದ ಭವ್ಯ ನಗರದಲ್ಲಿ ಎಲ್ಲಾ ಸ್ಕೌಟ್-ಗೈಡ್‌ಗಳಿಗೆ ದೊರಕಿದ ಅನುಭವ, ವಿಶ್ವದ ಬೇರೆ ಬೇರೆ ದೇಶಗಳ ಸ್ಕೌಟ್‌ಗಳ ಸ್ನೇಹಸಂಪರ್ಕ ನಮಗೆಲ್ಲಾ ವಿಶಿಷ್ಠ ಅನುಭವ.

ನಮ್ಮ ರಾಜ್ಯ ಹಾಗೂ ರಾಷ್ಟ್ರದಿಂದ ಬಂದಿದ್ದ 200 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳಿಗೆ ಈ ಜಾಂಬೋರಿ ಅತ್ಯಂತ ರೋಮಾಂಚಕಾರಿ ಅನುಭವ ಹಾಗೂ ಜ್ಞಾನವನ್ನು ನೀಡುವಲ್ಲಿ ಯಶಸ್ವಿಯಾಗಿದೆ ಎಂದು ಭಾವಿಸಿದ್ದೇನೆ. ಚಿಕ್ಕ ವಯಸ್ಸಿನಲ್ಲಿಯೇ ವಿದೇಶ ಪರ್ಯಟನೆಯೊಂದಿಗೆ ಅಸಂಖ್ಯಾತ ಮಿತ್ರರನ್ನು ಪಡೆಯುವ ಸೌಭಾಗ್ಯ ನಿಜಕ್ಕೂ ಹೆಮ್ಮೆಯ ಹಾಗೂ ಅಭಿಮಾನದ ವಿಷಯ. ವಿಶ್ವ ಜಾಂಬೋರಿಯಲ್ಲಿ ಭಾಗವಹಿಸಿದ ಎಲ್ಲ ಸ್ಕೌಟ್-ಗೈಡ್‌ಗಳು ತಮ್ಮ ಮುಂದಿನ ದಿನಗಳಲ್ಲಿ ಚಳುವಳಿಯ ಆದರ್ಶ-ತತ್ವಗಳಿಗೆ ಬದ್ದರಾಗಿ, ಚಳುವಳಿಯ ಬೆಳವಣಿಗೆಯಲ್ಲಿ ತಮ್ಮ ಪಾಲಿನ ಕರ್ತವ್ಯವನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸುತ್ತಾರೆಂದು ಆಶಿಸುತ್ತೇನೆ.

ಸಂಸ್ಥೆಯ ಸ್ಥಾಪಕ ಲಾರ್ಡ್ ಬೇಡನ್ ಪೊವೆಲ್‌ರವರ ಚಿಂತನೆಯಂತೆ "ದಿನಕ್ಕೊಂದು ಉಪಕಾರ ಮಾಡುವ" ಮನೋಭೂಮಿಕೆ ಬೆಳಸಿಕೊಳ್ಳೋಣ ಹಾಗೂ ಬಿ.ಪಿ. ಹೇಳಿದಂತೆ "ನಾವು ಸಂತೋಷವಾಗಿರಬೇಕಾದರೆ ಇತರೊಂದಿಗೆ ಸಂತೋಷವನ್ನು ಹಂಚಿಕೊಳ್ಳಬೇಕು ಹಾಗೂ ನಾವು ಪ್ರಪಂಚಕ್ಕೆ ಬಂದಾಗಿಗಿಂತಲೂ ಉತ್ತಮ ರೀತಿಯಲ್ಲಿ ಇರುವಂತೆ ಜಗತ್ತನ್ನು ಬಿಡುವಾಗ ಕಾಣುವ ಪ್ರಯತ್ನ ಮಾಡಬೇಕು" ಎಂಬ ಚಿಂತನೆಗಳನ್ನು ಕಾರ್ಯಗತಗೊಳಿಸಲು ಕಾರ್ಯಪ್ರವೃತ್ತರಾಗೋಣ.

(ಕೊಂಡಜ್ಜಿ ಬಿ. ಷಣ್ಮುಖಪ್ಪ)
ರಾಜ್ಯ ಮುಖ್ಯ ಆಯುಕ್ತರು

Pulse Polio Programme
5th January & 9th February 2003
Ministry of Health & Family Welfare

# ರಾಷ್ಟ್ರೀಯ ಪೋಲಿಯೋ ಲಸಿಕೆ ಕಾರ್ಯಕ್ರಮದಲ್ಲಿ ಕರ್ನಾಟಕ ಸ್ಕೌಟ್ಸ್ ಗೈಡ್ಸ್‌ಗಳಿಂದ ಸೇವೆ

## ಪೋಲಿಯೋಗೆ ಯಾವುದೇ ವರ್ಗ ಸೀಮಾ ರೇಖೆ ಇರುವುದಿಲ್ಲ

ಜನವರಿ ೫ನೇ ತಾರೀಕು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಏರ್ಪಡಿಸಿದ ಪೋಲಿಯೋ ಲಸಿಕೆ ಕಾರ್ಯಕ್ರಮದಲ್ಲಿ ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಎಲ್ಲಾ ಜಿಲ್ಲಾ ಸಂಸ್ಥೆಗಳು ಸ್ಥಳೀಯ ಸಂಸ್ಥೆಗಳು ಮತ್ತು ದಳ ಮಟ್ಟದಲ್ಲಿ ಸ್ಕೌಟ್ಸ್, ಗೈಡ್ಸ್‌ಗಳು ಸರ್ಕಾರಿ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಶಾಲೆಗಳ ಆವರಣದಲ್ಲಿ ಏರ್ಪಡಿಸಿದ ಪೋಲಿಯೋ ಲಸಿಕೆ ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಸೇವೆ ಸಲ್ಲಿಸಿರುತ್ತಾರೆ.

**ನೆನಪಿರಲಿ**




**ಕರ್ನಾಟಕ ಸರ್ಕಾರ ದಿನಾಂಕ 9ನೇ ಫೆಬ್ರವರಿ 2003ರಂದು ಏರ್ಪಡಿಸಿರುವ ಲಸಿಕಾ ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿ ಸಾರ್ವಜನಿಕರಿಗೆ ಪ್ರೋತ್ಸಾಹಿಸಿ ಸೇವೆ ಸಲ್ಲಿಸಲು ಕೋರಲಾಗಿದೆ.**



ದಿನಾಂಕ : 05-01-2003ರಂದು ಬೆಂಗಳೂರಿನಲ್ಲಿ
ಜರುಗಿದ ಪೋಲಿಯೋ ಲಸಿಕೆ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ - ಗೈಡ್ ಗಳು

# SWAMI VIVEKANANDA JAYANTHI OBSERVED AS NATIONAL YOUTH DAY

**KS & G NEWS SERVICE**

**BANGALORE - JAN 12**

Swami Vivekananda Jayanthi was observed as **"National Youth Day"** On 12th January 2003 by the Bharat Scouts & Guides, Karnataka in a befitting manner at the Unit, Taluk and the District Levels Mrs. Theresa Webster Trainer for Beaver Scout Leaders and Chairman First Aid Team, Shoeburness, Essex U.K. participated in a function held at State Headquarters, Bangalore on 12th January 2003. Scouts and Guides from 15th Kanteerava Group attended the function. Sri M.A. Chelliah, Headquarters Commissioner (PR) spoke on Swami Vivekananda. Sri. M. Srinivas, Member, State Executive Committee welcomed the Guests and the participants. Mrs. Theresa Webster addressed the gathering and interacted with the Scouts and Guides on various activities of the movement.



## OBSERVANCE OF NATIONAL YOUTH DAY

Hassan, Chikmagalur District Organised a programme on 12th Jan' 2003 and Observed the National Youth Day at their District Headquarters. 500 Scouts and Guides participated in the programme. Essay Competition and talk on Swami Vivekananda were conducted for the Scouts and Guides by the respective District Associations.

## U.K. UNIT LEADERS VISITED BANGALORE

Mrs. Theresa Webster along with Mr. Chris Webster, Essex County Quarter Master (Scouts) visited the State Headquarters on 11th Jan' 2003. They were received by Sri M.A. Chelliah, HqC (PR). Sri. Shivananjappa, District Secretary, Bangalroe Rural, Sri. K.V. Narappa, ASOC (S), Sri K.H. Jayaramaiah, Manager. Mrs. Felcy, Accountant and others.

## ಸ್ಕೌಟ್ ಶಿಕ್ಷಕರಿಗಾಗಿ 52ನೇ ಹಿಮಾಲಯ ವುಡ್ ಬ್ಯಾಡ್ಜ್ ತರಬೇತಿ ಶಿಬಿರ

ಕೊಂಡಜ್ಜಿ ಬಸಪ್ಪ ಸ್ಕೌಟ್ ಮತ್ತು ಗೈಡ್ ತರಬೇತಿ ಕೇಂದ್ರ, ಕೊಂಡಜ್ಜಿ ಇಲ್ಲಿ ದಿನಾಂಕ 11.01.2003 ರಿಂದ 20.01.2003ರ ವರೆಗೆ ಸ್ಕೌಟ್ ಶಿಕ್ಷಕರಿಗಾಗಿ ರಾಜ್ಯಮಟ್ಟದ ಹಿಮಾಲಯ ವುಡ್ ಬ್ಯಾಡ್ಜ್ ತರಬೇತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು.

ಶ್ರೀ ಸಿ.ಆರ್. ಮಹಮ್ಮದ್ ಜಹಿರುದ್ದೀನ್, ರಾಜ್ಯ ಆಯುಕ್ತರು (ಸ್ಕೌಟ್) ಇವರು ಶಿಬಿರವನ್ನು ಉದ್ಘಾಟಿಸಿದರು. ಶ್ರೀ ಮಹಮ್ಮದ್ ವಾಸಿಲ್, ಕೇಂದ್ರೀಯ ಸ್ಥಾನಿಕ ಆಯುಕ್ತರು (ಕಾರ್ಯಕ್ರಮ) ಮತ್ತು ಶ್ರೀಮತಿ ಪಿ. ಸರೋಜ, ಮಾಜಿ ರಾಜ್ಯ ಸಂಘಟನಾ ಆಯುಕ್ತರು (ಗೈ) ಇವರು ಉಪಸ್ಥಿತರಿದ್ದರು.

ದಿನಾಂಕ 12.01.2003 ರಂದು ಸ್ವಾಮಿ ವಿವೇಕಾನಂದ ಜಯಂತಿಯನ್ನು ಶಿಬಿರದಲ್ಲಿ ಆಚರಿಸಲಾಯಿತು. ರಾಜ್ಯ ಖಜಾಂಚಿಗಳಾದ ಪ್ರೊ|| ಎಂ.ಎಸ್. ಅಪ್ಪ ಅವರು ಸ್ವಾಮಿ ವಿವೇಕಾನಂದರ ಜೀವನದ ಬಗ್ಗೆ ಮಾತನಾಡಿದರು.

ದಿನಾಂಕ 18.01.2003 ರಂದು ತರಬೇತಿಯ ಅಂಗವಾಗಿ ಶಿಬಿರಾರ್ಥಿಗಳು ಪಕ್ಕದ ಗ್ರಾಮವಾದ ರಾಗಿಯಸಲವಾಡಕ್ಕೆ ಕಾಲ್ನಡಿಗೆಯಲ್ಲಿ ಹೊರ ಸಂಚಾರ ತೆರಳಿ ರಾತ್ರಿ ಶಿಬಿರಾಗ್ನಿ ನಡೆಸಿದರು. ಗ್ರಾಮದ ಮುಖಂಡರಾದ ಶ್ರೀ ಕರೇನ ಗೌಡರು ಶಿಬಿರಾಗ್ನಿಯನ್ನು ಉದ್ಘಾಟಿಸಿದರು.

ದಿನಾಂಕ 20.01.2003 ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ನಾರಾಯಣಶೆಟ್ಟಿ ಭಾಗವಹಿಸಿದ್ದರು. ತರಬೇತಿಯ ಅವಧಿಯಲ್ಲಿ ಶಿಬಿರಾರ್ಥಿಗಳು, ಸ್ಕೌಟ್ ಕೌಶಲಗಳನ್ನು ಬಳಸಿ ಪಯನೀರಿಂಗ್ ರಚಿಸಿದರು. ಉತ್ಸಾಹ ಹಾಗೂ ಆಸಕ್ತಿಯಿಂದ ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು.

ರಾಜ್ಯದ 13 ಜಿಲ್ಲೆಗಳಿಂದ ಒಟ್ಟು 38 ಸ್ಕೌಟ್ ಶಿಕ್ಷಕರು ಈ ತರಬೇತಿ ಪಡೆದರು. ಶ್ರೀ ಎನ್. ಶ್ರೀನಿವಾಸನ್ ಎಲ್.ಟಿ.(ಸ್ಕೌ) ಇವರು ಶಿಬಿರದ ನಾಯಕರಾಗಿದ್ದರು. ಶ್ರೀ ಪಿ.ಜಿ. ಪಂಡಿತ್ ಎಲ್.ಟಿ.(ಸ್ಕೌ) ಮತ್ತು ಶ್ರೀ ವಿಶ್ವನಾಥ ಶೆಟ್ಟಿ, ಎ.ಎಲ್.ಟಿ.(ಸ್ಕೌ) ಇವರುಗಳು ಸಹಾಯಕರಾಗಿದ್ದರು.

## ● Gone Home ●

## S.P. Poonacha

### Leader Trainer (Cubs)



Sri S.P. Poonacha, Leader Trainer (Cubs) Kodagu, Member of the State Council, former Asst State Organising Commissioner (S) and Districti Training Commissioner (S) Kodagu District passed away after brief illness at Mahaveer Jain Hospital, Bangalore on 18.01.2003 at the age of 70.

He served the Movement with total Commitment and Dedication as ASOC, DTC of Kodagu District for more than four decades, particularly as a distinguished Cub Leader and Committed Professional Worker.

He leaves behind his Wife Smt. C.A. Meenaxi, District Chief Commissioner, Kodagu and host of relatives and admirers.

**MAY HIS SOUL REST IN PEACE**

# ಜಿಲ್ಲಾ ವಾರ್ತೆಗಳು

## ಬೆಂಗಳೂರು ಗ್ರಾಮಾಂತರ ಜಿಲ್ಲೆ

ದಿನಾಂಕ 18.12.2002 ರಂದು ಕನಕಪುರ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಒಂದು ದಿನದ ತಾಲ್ಲೂಕ್



ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಂದ ನೃತ್ಯ

ಮೇಳವನ್ನು ಹಾರೋಹಳ್ಳಿ ಹಾ.ವಿ.ಸಂಸ್ಥೆಯ ಮೈದಾನದಲ್ಲಿ 1142 ಸ್ಕೌಟ್ಸ್, ಗೈಡ್ಸ್ ಹಾಗೂ ಕಬ್ಸ್ ಬುಲ್ ಬುಲ್ಸ್‌ಗಳನ್ನು ಸೇರಿಸಿ ಈ ಕೆಳಕಂಡ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ನಡೆಸಲಾಯಿತು. **ಉದ್ಘಾಟನೆ** - ಶ್ರೀ ಹೆಚ್. ಗುಂಡುರಾವ್, ಮು.ಶಿ. ಬಾಪು ಹಿ.ಪ್ರಾ. ಶಾಲೆ ಹಾರೋಹಳ್ಳಿ. **ಅಧ್ಯಕ್ಷತೆ** - ಶ್ರೀ ಶಿವನಂಜಪ್ಪ, ಜಿಲ್ಲಾ ಕಾರ್ಯದರ್ಶಿ ಭಾರತ್ ಸ್ಕೌಟ್ಸ್ - ಗೈಡ್ಸ್, ಬೆಂಗಳೂರು ಗ್ರಾಮಾಂತರ ಜಿಲ್ಲೆ. ಶ್ರೀ. ಎಲ್ಲೆಗೌಡ ಬೆಸಗರಹಳ್ಳಿ ವಂದಿಸಿದರು. **ಶಿಬಿರಕ್ಕೆ** ಮಾನ್ಯಶ್ರೀ ದೊಡ್ಡಸಿದ್ದಪ್ಪ, ಜಿಲ್ಲಾ ಮುಖ್ಯ ಆಯುಕ್ತರು ಭೇಟಿನೀಡಿ ಮಕ್ಕಳ ಚಟುವಟಿಕೆಗಳನ್ನು ಪರಿಶೀಲಿಸಿ ಮಾರ್ಗದರ್ಶಿನ ನೀಡಿ ಹಾರೈಸಿರುತ್ತಾರೆ. ಮಾನ್ಯಶ್ರೀ ಟಿ.ಆರ್. ನಾರಾಯಣಗೌಡರು ಶಿಬಿರಕ್ಕೆ ಆಗಮಿಸಿ ಸೂಕ್ತ ಸಲಹೆ ನೀಡಿರುತ್ತಾರೆ. **ಮುಕ್ತಾಯ ಸಮಾರಂಭ - ಅಧ್ಯಕ್ಷತೆ** ಶ್ರೀ ಬುಜಂಗಯ್ಯ, ಕಾರ್ಯದರ್ಶಿ. ಹಾ.ವಿ. ಸಂಸ್ಥೆ ಹಾರೋಹಳ್ಳಿ. ಸಮಾರೋಪ ಭಾಷಣ, ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಪ್ರಧಾನ ಆಯುಕ್ತರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಎಂ. ಶಾಂತಿಮತಿ, ಜಂಟಿ ಕಾರ್ಯದರ್ಶಿ ಶ್ರೀ ಕೆ. ತಿಮ್ಮಪ್ಪ, ನಿ|| ರಾಜ್ಯ ಸಂಘಟನಾ ಆಯುಕ್ತರು, ಶ್ರೀ ನಾರಾಯಣ ಶೆಟ್ಟಿ, ಶ್ರೀಮತಿ ಜಾನಕಿ ವೇಣುಗೋಪಾಲ್, ಶ್ರೀ ಎನ್. ಶ್ರೀನಿವಾಸ್ ರವರು ಭಾಗವಹಿಸಿದ್ದರು.

ಈ ಶಿಬಿರದ ಯಶಸ್ಸಿಗೆ ಶ್ರಮಿಸಿದ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳಿಗೆ ಮೆಚ್ಚುಗೆಯನ್ನು ವ್ಯಕ್ತ ಪಡಿಸುವ ಮೂಲಕ ಅಂತರಾಷ್ಟ್ರೀಯ ಭ್ರಾತೃತ್ವವುಳ್ಳ ಈ ಸಂಸ್ಥೆಯ ಶ್ರೇಯೋಭಿವೃದ್ಧಿಗೆ, ಪ್ರತಿ ಶಾಲೆಯಲ್ಲೂ ದಳಗಳನ್ನು ತೆರೆದು ಆ ಮೂಲಕ ಮಗುವಿನಲ್ಲಿ ರಾಷ್ಟ್ರೀಯ ಭಾವೈಕ್ಯತೆ, ಶಿಸ್ತು ಬೆಳಸುವುದಲ್ಲದೆ ಸಮಾಜದಲ್ಲಿ ಶುದ್ಧತೆಗಾಗಿ ಶ್ರಮಿಸಲು ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಕರೆ ನೀಡಿದರು.

ಈ ಮೇಳದ ವ್ಯವಸ್ಥೆಗೆ ಎಲ್ಲಾ ರೀತಿಯ ಸಹಕಾರ ನೀಡಿದ ಸನ್ಮಾನ್ಯಶ್ರೀ ಪಿ.ಜಿ.ಆರ್. ಸಿಂಧ್ಯಾ, ಅಧ್ಯಕ್ಷರು, ಭಾ.ಸ್ಕೌ.ಗೈ.ಬೆಂ. ಗ್ರಾಮಾಂತರ ಜಿಲ್ಲೆ ಹಾಗೂ ಸ್ಥಳೀಯ ಜನತೆಗೆ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಎಲ್ಲೆಗೌಡ ಬೆಸಗರಳ್ಳಿ ಇವರು ವಂದಿಸಿದರು.

## ಚನ್ನಪಟ್ಟಣ ತಾಲ್ಲೂಕು

ಚನ್ನಪಟ್ಟಣದಲ್ಲಿ ತಾಲ್ಲೂಕು ಮಟ್ಟದ ಪೆಟ್ರೋಲ್ ನಾಯಕರ ತರಬೇತಿ ಶಿಬಿರವು ದಿನಾಂಕ : 18.11.2002 ರಂದು ಪ್ರಾರಂಭವಾಗಿ 20.11.2002 ರಂದು ಮುಕ್ತಾಯವಾಯಿತು. ಈ ಶಿಬಿರದ ಉದ್ಘಾಟನೆಯನ್ನು ಶ್ರೀ ಸು.ತಾ. ರಾಮೇಗೌಡರು, ಬಯಲು ಸೀಮೆ ಪತ್ರಿಕೆಯ ಸಂಪಾದಕರು ನೆರವೇರಿಸಿದರು. ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ಸಿ. ನಾರಾಯಣಸ್ವಾಮಿಯವರು ಅಧ್ಯಕ್ಷತೆಯನ್ನು ವಹಿಸಿದ್ದರು.

ಮುಕ್ತಾಯ ಸಮಾರಂಭವು ದಿನಾಂಕ 20.11.2002 ರಂದು 3.00 ಗಂಟೆಗೆ ನಡೆಯಿತು. ಶ್ರೀ ಸಿ.ಎನ್. ನಾರಾಯಣ ಸ್ವಾಮಿ ಅವರು ಸಮಾರೋಪ ಭಾಷಣ ಮಾಡಿದರು. ಅಧ್ಯಕ್ಷತೆಯನ್ನು ಶ್ರೀ ನಾಗರಾಜು ಸಂಸ್ಥೆಯ ಟ್ರಸ್ಟ್ ಉಪಾಧ್ಯಕ್ಷರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಟ್ರಸ್ಟ್‌ನ ಕಾರ್ಯದರ್ಶಿಗಳಾದ ಶ್ರೀ ಅಜಮತ್ ವುಲ್ಲಾಖಾನ್ ಉಪಸ್ಥಿತರಿದ್ದರು. ಸರ್ಕಾರಿ ನೌಕರರ ಸಂಘದ ಅಧ್ಯಕ್ಷರಾದ ಶ್ರೀ ಎಸ್.ಆರ್. ರಮೇಶ್‌ರವರು ಪ್ರಶಸ್ತಿ ಪತ್ರಗಳನ್ನು ವಿತರಿಸಿದರು. 200 ಸ್ಕೌಟ್ಸ್ ಮತ್ತು ಗೈಡ್‌ಗಳು, 47 ಶಿಕ್ಷಕ / ಶಿಕ್ಷಕಿಯರು ಭಾಗವಹಿಸಿದ್ದರು.

## ಬೆಂಗಳೂರು ದಕ್ಷಿಣ ಜಿಲ್ಲೆ ಆನೇಕಲ್ ತಾಲ್ಲೂಕು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಆನೇಕಲ್ ತಾಲ್ಲೂಕು ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ತಾಲ್ಲೂಕು ಮಟ್ಟದ ಸ್ಕೌಟ್ ಗೈಡ್ ಮೇಳ -2002ನ್ನು ದಿನಾಂಕ 28-12-2002ರ ಶನಿವಾರದಂದು ಚಂದಾಪುರದ ಸ್ವಾಮಿ ವಿವೇಕಾನಂದ ಗ್ರಾಮಾಂತರ ಪ್ರೌಢಶಾಲೆಯ ಆಟದ ಮೈದಾನದಲ್ಲಿ ಏರ್ಪಡಿಸಲಾಗಿತ್ತು.

ತಾಲ್ಲೂಕಿನ ನಾನಾ ಶಾಲೆಗಳಿಂದ ಆಗಮಿಸಿದ್ದ ಒಟ್ಟು 1026 ಸ್ಕೌಟ್-ಗೈಡ್‌ಗಳು ಈ ಮೇಳದಲ್ಲಿ ಭಾಗವಹಿಸಿದ್ದರು.

ಬೆಳಿಗ್ಗೆ 10 ಗಂಟೆಗೆ ಉದ್ಘಾಟನಾ ಸಮಾರಂಭ ನಡೆಯಿತು. ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳಾದ ಡಾ|| ಡಿ.ಎಸ್. ಅಶ್ವಥ್‌ರವರು




ಆನೇಕಲ್ ತಾಲ್ಲೂಕು ಮಟ್ಟದ ಸ್ಕೌಟ್ಸ್ ಗೈಡ್ಸ್ ಸಮಾವೇಶದ ಉದ್ಘಾಟನಾ ಸಮಾರಂಭದಲ್ಲಿ ಉಪಸ್ಥಿತರಿರುವ ಜಿಲ್ಲಾಧಿಕಾರಿಗಳಾದ ಡಾ|| ಡಿ.ಎಸ್. ಅಶ್ವಥ್, ಭಾ.ಆ.ಸೇ., ಶಾಸಕ ಶ್ರೀ. ಎ. ನಾರಾಯಣಸ್ವಾಮಿ, ರಾಜ್ಯ ಕಿಯೋನಿಕ್ಸ್‌ನ ವ್ಯವಸ್ಥಾಪಕ ನಿರ್ದೇಶಕ ಶ್ರೀ ಭಾಸ್ಕರ್‌ರಾವ್, ಐ.ಪಿ.ಎಸ್., ಜಿಲ್ಲಾ ಪಂಚಾಯತಿ ಸದಸ್ಯೆ ಶ್ರೀಮತಿ ಡಿ. ವಿಜಯಲಕ್ಷ್ಮಿ, ತಾಲ್ಲೂಕು ಪಂಚಾಯತಿ ಸದಸ್ಯ ಶ್ರೀ ಬಿ.ಟಿ. ದಯಾನಂದರೆಡ್ಡಿ ಮತ್ತಿತರರು.

ಜ್ಯೋತಿ ಬೆಳಗುವ ಮೂಲಕ ಮೇಳವನ್ನು ಉದ್ಘಾಟಿಸಿ ಮಾತನಾಡುತ್ತಾ ಸ್ಕೌಟ್ಸ್ ಗೈಡ್ಸ್ ಸಂಸ್ಥೆಗೆ ಸಹಕಾರ ಮತ್ತು ಪ್ರೋತ್ಸಾಹವನ್ನು ಎಲ್ಲಾ ಇಲಾಖೆಯವರು ನೀಡಿ ಪೋಷಿಸಬೇಕು ಎಂದು ನುಡಿದರು. ಸ್ಥಳೀಯ ಶಾಸಕರಾದ ಶ್ರೀ ಎ. ನಾರಾಯಣಸ್ವಾಮಿ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಈ ಸಂಸ್ಥೆಯು ಧ್ಯೇಯೋದ್ದೇಶಗಳನ್ನು ಮೆಚ್ಚಿ ಸಂಸ್ಥೆಗೆ ಸ್ಥಿರವಾದ ನೆಲೆ ಬೇಕು ಎಂದು ಹೇಳಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ರಾಜ್ಯ ಕಿಯೋನಿಕ್ಸ್‌ನ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀಭಾಸ್ಕರ್ ರಾವ್ ಐ.ಪಿ.ಎಸ್. ರವರು ಈ ಸಂಸ್ಥೆಯು ಕಾರ್ಯಚಟುವಟಿಕೆಗಳನ್ನು ಮನಸಾರೆ ಮೆಚ್ಚಿಕೊಂಡು ಮಕ್ಕಳು ಸ್ವಾವಲಂಬಿಗಳಾಗಬೇಕೆಂದು ನುಡಿದರು. ಜಿಲ್ಲಾ ಪಂಚಾಯಿತಿ ಸದಸ್ಯೆ ಶ್ರೀಮತಿ ಡಿ. ವಿಜಯಲಕ್ಷ್ಮೀ, ತಾಲ್ಲೂಕು ಪಂಚಾಯಿತಿ ಅಧ್ಯಕ್ಷೆ ಶ್ರೀಮತಿ ಲಕ್ಷ್ಮೀ ಆರ್. ರೆಡ್ಡಿ, ತಾಲ್ಲೂಕು ಪಂಚಾಯಿತಿ ಸದಸ್ಯ ಶ್ರೀ ಬಿ.ಟಿ. ದಯಾನಂದರೆಡ್ಡಿ, ತಾಲ್ಲೂಕು ಬಿ.ಜೆ.ಪಿ. ಅಧ್ಯಕ್ಷ ಶ್ರೀ ಜಯಣ್ಣ, ಸಹಾಯಕ ಜಿಲ್ಲಾ ಆಯುಕ್ತೆ (ಗೈ) ಶ್ರೀಮತಿ ಅಶ್ವತಮ್ಮನಾರಾಯಣರೆಡ್ಡಿ, ಮುಂತಾದವರು ಉಪಸ್ಥಿತರಿದ್ದರು. ಸಹಾಯಕ ಜಿಲ್ಲಾ ಆಯುಕ್ತರುಗಳಾದ ಶ್ರೀ ಎಂ. ಮುನಿಸ್ವಾಮಿ ರೆಡ್ಡಿ ಸ್ವಾಗತಿಸಿದರು. ಶ್ರೀ ಹೆಚ್.ಎಸ್. ನಾಗರಾಜಪ್ಪ ವಂದಿಸಿದರು. ಚಿಕ್ಕಹೊಸಹಳ್ಳಿ ಸರ್ಕಾರಿ ಹಿರಿಯ ಪ್ರಾಥಮಿಕ ಪಾಠ ಶಾಲೆಯ ಸ್ಕೌಟ್ ಗೈಡ್‌ಗಳಿಂದ ನೃತ್ಯ ಏರ್ಪಡಿಸಲಾಗಿತ್ತು.

ನಂತರ ವಾದ್ಯವೃಂದದೊಂದಿಗೆ ಗ್ರಾಮದ ಪ್ರಮುಖ ಬೀದಿಗಳಲ್ಲಿ ಪಥ ಸಂಚಲನ ನೆರವೇರಿಸಲಾಯಿತು. ಶಿಸ್ತಿನ ಸಿಪಾಯಿಗಳಂತೆ ಸ್ಕೌಟ್-ಗೈಡ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ನಾಗರಿಕರ ಗಮನ ಸೆಳೆದರು.

ಸಂಜೆ 4 ಗಂಟೆಗೆ ಸಮಾರೋಪ ಸಮಾರಂಭ ನಡೆಯಿತು. ಆನೇಕಲ್ ಪುರಸಭೆಯ ಅಧ್ಯಕ್ಷೆ ಶ್ರೀಮತಿ ಮಂಜುಳ ಆದಿಕೇಶವ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ತಾಲ್ಲೂಕು ಪಂಚಾಯಿತಿ ಮಾಜಿ ಅಧ್ಯಕ್ಷ ಹಾಗೂ ಹಾಲಿ ಸದಸ್ಯ ಶ್ರೀ ಕೆ.ಸಿ. ರಾಮಚಂದ್ರ ಸಮಾರೋಪ ಭಾಷಣ ಮಾಡಿದರು. ನಿವೃತ್ತ ರಾಜ್ಯ ಸಂಘಟನಾ ಆಯುಕ್ತ (ಸ್ಕೌ) ಶ್ರೀ ಕೆ. ತಿಮ್ಮಪ್ಪನವರನ್ನು ಸನ್ಮಾನಿಸಲಾಯಿತು. ಸಹಾಯಕ ಜಿಲ್ಲಾ ಆಯುಕ್ತ (ಸ್ಕೌ) ಶ್ರೀ ಎಂ. ಮುನಿಸ್ವಾಮಿರೆಡ್ಡಿರವರಿಗೆ ಮೆಡಲ್ ಆಫ್ ಮೆರಿಟ್ ಪ್ರದಾನ ಮಾಡಲಾಯಿತು. ರಾಜ್ಯ ಸಂಘಟನಾ ಆಯುಕ್ತ ಶ್ರೀ ನಾರಾಯಣಶೆಟ್ಟಿ ಉಪಸ್ಥಿತರಿದ್ದರು.

## ಮಂಡ್ಯ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ದಿನಾಂಕ 15-12-2002 ರಂದು ಸ್ಕೌಟ್ಸ್ ಭವನದಲ್ಲಿ ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹಾಗೂ ಕುಷ್ಠರೋಗ ನಿರ್ಮೂಲ ಸಲಹೆಗಾರರಾದ ಡಾ।। ಲಿಂಗಯ್ಯ ಅವರಿಂದ ಕುಷ್ಠ ರೋಗ, ಏಡ್ಸ್ ಹಾಗೂ ಇತರ ಆರೋಗ್ಯ ವಿಚಾರವಾಗಿ ಉಪನ್ಯಾಸ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತ್ತು.

ಕಾರ್ಯಕ್ರಮದಲ್ಲಿ ಎಂ.ಇ.ಎಂ. ಕೀಲಾರ, ಪೋಲೀಸ್ ಕಾಲೋನಿ, ಪ್ರೌಢ ಶಾಲೆಯ ಸ್ಕೌಟ್ಸ್ ಎಂ.ಇ.ಎಸ್. ಪ್ರೌಢಶಾಲೆಯ ಸ್ಕೌಟ್ಸ್ ಗೈಡ್ಸ್ ಹೊಳಲು ಪ್ರೌಢ ಶಾಲೆಯ ಗೈಡ್ಸ್, ಜೈಹಿಂದ್ ಓಪನ್ ಗ್ರೂಪನ್ ರೋವರ್ ಸ್ಕೌಟ್ಸ್ ಸೇರಿದಂತೆ ಒಟ್ಟು 50 ವಿದ್ಯಾರ್ಥಿಗಳು ಭಾಗವಹಿಸಿದ್ದರು.

## ಚಿಕ್ಕಮಗಳೂರು ಜಿಲ್ಲೆ

ದಿನಾಂಕ : 28-12-2002 ರಂದು ಚಿಕ್ಕಮಗಳೂರು ತಾಲ್ಲೋಕ್ ಮಟ್ಟದ ಸ್ಕೌಟ್ಸ್ - ಗೈಡ್ಸ್

ಮೇಳ ಹಾಗೂ ಕಬ್ಸ್ - ಬುಲ್ ಬುಲ್ಸ್ ಉತ್ಸವವನ್ನು ಚಿಕ್ಕಮಗಳೂರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆಯ ವತಿಯಿಂದ ಏರ್ಪಡಿಸಲಾಗಿತ್ತು.

ಮೇಳದ ಅಂಗವಾಗಿ ಬೆಳಿಗ್ಗೆ 8.30ಕ್ಕೆ ಸರಿಯಾಗಿ ಚಿಕ್ಕಮಗಳೂರು ತಾಲ್ಲೋಕ್ ಕಛೇರಿ ಆವರಣದಿಂದ ನಗರದ ಎಂ.ಜಿ. ರಸ್ತೆಯ ಮೂಲಕ ಸ್ಕೌಟ್ಸ್ - ಗೈಡ್ಸ್, ಕಬ್ಸ್ - ಬುಲ್ ಬುಲ್ಸ್‌ಗಳ ಆಕರ್ಷಕ ಪಥ



ಬುಲ್ ಬುಲ್ ಮರದ ರಚನೆಯಲ್ಲಿ ಬುಲ್ ಬುಲ್‌ಗಳು

ಸಂಚಲನ ಕಾರ್ಯಕ್ರಮ ಟೌನ್ ಮಹಿಳಾ ಸಮಾಜ ಶಾಲೆಯ ಹಾಗೂ ಸರ್ಕಾರಿ ಪದವಿ ಪೂರ್ವ ಶಾಲೆಯ ಸ್ಕೌಟ್ಸ್ - ಗೈಡ್ಸ್ ಬ್ಯಾಂಡ್ಸ್ ತಂಡದೊಂದಿಗೆ ಜಿಲ್ಲಾ ಆಟದ ಮೈದಾನದವರೆಗೆ ನಡೆಯಿತು. 704 ಸ್ಕೌಟ್ಸ್ - ಗೈಡ್ಸ್, ಕಬ್ಸ್ - ಬುಲ್ ಬುಲ್ಸ್ ಮಕ್ಕಳು ಚಿಕ್ಕಮಗಳೂರು ತಾಲ್ಲೋಕ್‌ನಾದ್ಯಂತ ವಿವಿಧ ಶಾಲೆಗಳಿಂದ ಭಾಗವಹಿಸಿದ್ದರು.

ಮೇಳದ ಉದ್ಘಾಟನೆಯನ್ನು ಶ್ರೀ ಡಿ.ವಿ. ಗಿರೀಶ್, ಜಿಲ್ಲಾ ಕಾರ್ಯದರ್ಶಿ, ಚಿಕ್ಕಮಗಳೂರು ಇವರು ನೆರವೇರಿಸಿದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಂ.ಎಸ್. ಷಡಾಕ್ಷರಿ ಅಧ್ಯಕ್ಷತೆ ವಹಿಸಿದರು. ಶ್ರೀಮತಿ ಸುಧಾರಾಜಶೇಖರ್, ಜಿಲ್ಲಾ ಗೈಡ್ಸ್ ಆಯುಕ್ತರು, ಮಕ್ಕಳಿಗೆ ಶುಭ ಹಾರೈಸಿದರು.

ರ್‍ಯಾಲಿಯ ಅಂಗವಾಗಿ ಸ್ಕೌಟ್ಸ್ - ಗೈಡ್ಸ್ ಕಬ್ಸ್ - ಬುಲ್ ಬುಲ್ಸ್‌ಗಳಿಗೆ ಧ್ವಜ ಸ್ಥಂಭ ರಚನೆ, ಸುಧಾರಿತ ಗುಡಾರಗಳ ರಚನೆ, ಕರಕುಶಲತೆ, ಮಾಡೆಲ್ ಮೇಕಿಂಗ್, ಗಾಳಿಪಟ ರಚನೆ ಗ್ರೀಟಿಂಗ್ ಕಾರ್ಡ್ ರಚನೆ, ರಂಗೋಲಿ, ಬೆಂಕಿ ಇಲ್ಲದೆ ಆಹಾರ ತಯಾರಿಸುವುದು ಪಥ ಸಂಚಲನ, ಸಮುದಾಯ ಸೇವಾ ಕಾರ್ಯಗಳು... ಇತ್ಯಾದಿ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು.

ರ್‍ಯಾಲಿಯ ಅಂಗವಾಗಿ ಬೊಳರಾಮೇಶ್ವರ ದೇವಸ್ಥಾನ ಆವರಣವನ್ನು ಹಾಗೂ ಜಿಲ್ಲಾ ಆಟದ ಮೈದಾನವನ್ನು ಸ್ಕೌಟ್ಸ್ - ಗೈಡ್ಸ್, ಕಬ್ಸ್ - ಬುಲ್ ಬುಲ್ಸ್ ಮಕ್ಕಳು ಸ್ವಚ್ಛಗೊಳಿಸಿದರು.

ಮೇಳದ ಸಮಾರೋಪ ಸಮಾರಂಭವು ಸಂಜೆ 4.30ಕ್ಕೆ ಸರಿಯಾಗಿ ಶ್ರೀ ಎಲ್.ವಿ. ಬಸವರಾಜು ಅಧ್ಯಕ್ಷರು, ನಗರ ಸಭೆ ಚಿಕ್ಕಮಗಳೂರು, ಇವರ ಅಧ್ಯಕ್ಷತೆಯಲ್ಲಿ ನೆಡೆಯಿತು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಬಿ.ಆರ್. ಕುಮಾರಸ್ವಾಮಿರವರು ಮುಖ್ಯ ಅತಿಥಿಗಳಾಗಿ ಆಗಮಿಸಿ, ಸ್ಕೌಟ್ ಸಂಸ್ಥೆಯ ಕಾರ್ಯಕ್ರಮಗಳ ಬಗ್ಗೆ ಪ್ರಶಂಸಿಸಿದರು. ಮತ್ತು ಚಿಕ್ಕಮಗಳೂರಿನ ಎಲ್ಲ ಶಾಲೆಗಳಲ್ಲೂ ಸ್ಕೌಟ್ಸ್ - ಗೈಡ್ಸ್ ಚಟುವಟಿಕೆಗಳು ವ್ಯವಸ್ಥಿತವಾಗಿ ನಡೆಯಲು ಹೆಚ್ಚು ದಳಗಳು ಪ್ರಾರಂಭವಾಗಲು ಶ್ರಮಿಸುವುದಾಗಿ ಕರೆ ನೀಡಿದರು. ಮತ್ತು ಭಾಗವಹಿಸಿದ ಮಕ್ಕಳಿಗೆ ಪ್ರಶಸ್ತಿ ಪತ್ರವಿತರಣೆ ಮಾಡಿದರು.



ವಿವಿಧ ಚಟುವಟಿಕೆಗಳಲ್ಲಿ ಸ್ಕೌಟ್ ಗೈಡ್‌ಗಳು

ಸಮಾರಂಭದಲ್ಲಿ ರಾಜ್ಯ ಸಂಸ್ಥೆ ಬೆಂಗಳೂರಿನಿಂದ ಶ್ರೀಮಾನ್ ಎಂ.ಎ. ಚಲ್ಲಯ್ಯರವರು ಕೇಂದ್ರ ಸ್ಥಾನಿಕ ಆಯುಕ್ತರು, ಸಾರ್ವಜನಿಕ ಸಂಪರ್ಕ ಇವರು ಅತಿಥಿಗಳಾಗಿ ಆಗಮಿಸಿ, ರ್‍ಯಾಲಿಯ ಕಾರ್ಯಕ್ರಮಗಳ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿದರು. ಶ್ರೀ ಬಿ.ಆರ್. ಸಚ್ಚಿದಾನಂದ ಜಿಲ್ಲಾ ಮುಖ್ಯ ಆಯುಕ್ತರು ಉಪಸ್ಥಿತರಿದ್ದು, ರ್‍ಯಾಲಿಯು ಯಶಸ್ವಿಯಾಗಿ ನಡೆದ ಬಗ್ಗೆ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು.

2001-2002ರ ಸಾಲಿನಲ್ಲಿ ರಾಜ್ಯ ಪುರಸ್ಕಾರ ಪ್ರಶಸ್ತಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಪಡೆದ ಶಾಲೆಗಳಿಗೆ ಪರ್ಯಾಯ ಪ್ರಶಸ್ತಿಗಳನ್ನು, ನೆನಪಿನ ಕಾಣಿಕೆಗಳನ್ನು ರ್‍ಯಾಲಿಯ ಅಂಗವಾಗಿ ನೀಡಲಾಯಿತು.

## ದಕ್ಷಿಣ ಕನ್ನಡ ಜಿಲ್ಲೆ

### ಜಿಲ್ಲಾ ಮಟ್ಟದ ಸ್ಕೌಟ್ಸ್ - ಗೈಡ್ಸ್ ಮೇಳ ಮತ್ತು ಕಬ್ ಬುಲ್ ಬುಲ್ ಉತ್ಸವ ಕುಕ್ಕೆ ಸುಬ್ರಮಣ್ಯ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಮಟ್ಟದ ಸ್ಕೌಟ್ಸ್ - ಗೈಡ್ಸ್ ಮೇಳ ಹಾಗೂ ಕಬ್ಸ್ ಮತ್ತು ಬುಲ್ ಬುಲ್ಸ್ ಉತ್ಸವವು ದಿನಾಂಕ 21, 22, ಮತ್ತು 23ನೇ ಡಿಸೆಂಬರ್ 2002 ರಂದು 3 ದಿನಗಳ ಕಾಲ ಕುಕ್ಕೆ ಶ್ರೀ ಸುಬ್ರಮಣ್ಯದಲ್ಲಿ ಎಸ್.ಎಸ್.ಪಿ.ಯು. ಕಾಲೇಜ್‌ನ ಆವರಣದಲ್ಲಿ ಸುಳ್ಯ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ನಡೆಯಿತು.

ಈ ಮೇಳದಲ್ಲಿ 700 ಸ್ಕೌಟ್ಸ್ - ಗೈಡ್ಸ್, ಕಬ್ಸ್ - ಬುಲ್ ಬುಲ್ಸ್ ಮಕ್ಕಳು ಜಿಲ್ಲೆಯ ವಿವಿಧ ಶಾಲೆಗಳಿಂದ ಭಾಗವಹಿಸಿದ್ದರು.

ದಿನಾಂಕ 21.12.2002 ರಂದು ಬೆಳಿಗ್ಗೆ 11.30ಕ್ಕೆ ಸ್ಕೌಟ್ಸ್ - ಗೈಡ್ಸ್ ಮೇಳವು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯಿತ್ ಅಧ್ಯಕ್ಷರಾದ ಶ್ರೀಮತಿ ಜ್ಯೋತಿ ಆರ್. ಸಾಲಿಯಾನ ಇವರಿಂದ ಉದ್ಘಾಟನೆಯಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎಸ್.ಎಂ. ಬಾಪೂ ಸಾಹೇಬ್ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಸುಳ್ಯ ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ವಿಮಲರಂಗಯ್ಯ ಎ.ಡಿ.ಸಿ(ಜಿ) ಮತ್ತು ತಾಲ್ಲೋಕ್ ಪಂಚಾಯ್ತಿ ಸದಸ್ಯರು. ಕೆ. ರಾಮಶರ್ಮ, ಪ್ರಾಂಶುಪಾಲರು, ಎಸ್.ಎಸ್.ಪಿ.ಯು. ಕಾಲೇಜಿನ ಲಕ್ಷ್ಮೀಶ ರೈ, ಕ್ರೀಡಾ ಸಂಯೋಜಕರು ಸುಳ್ಯ, ಇವರುಗಳು ಭಾಗವಹಿಸಿದ್ದರು.



ರಚನಾತ್ಮಕ ಚಟುವಟಿಕೆಗಳಲ್ಲಿ ನಿರತರಾಗಿರುವ ಸ್ಕೌಟ್ ಮತ್ತು ಗೈಡ್‌ಗಳು

ಪಥ ಸಂಚಲನ ಕಾರ್ಯಕ್ರಮವು ಸುಬ್ರಮಣ್ಯ ನಗರದ ಪ್ರಮುಖ ಬೀದಿಗಳಲ್ಲಿ ಜರುಗಿತು. ಪುತ್ತೂರು ರೋವರ್ಸ್ ಬ್ಯಾಂಡ್ ತಂಡವು ಪಥ ಸಂಚಲನಕ್ಕೆ ಮೆರುಗು ನೀಡಿತು.

ದಿನಾಂಕ 21 ರಂದು ಜಾನಪದ ಉತ್ಸವವನ್ನು ಶ್ರೀಮತಿ ವಿಮಲರಂಗಯ್ಯ ಎ.ಡಿ.ಸಿ.(ಜಿ) ಮತ್ತು ತಾಲ್ಲೋಕ್ ಪಂಚಾಯ್ತಿ ಸದಸ್ಯರು ಸೂಳ್ಯ ಇವರು ಉದ್ಘಾಟಿಸಿದರು. ದಿನಾಂಕ 22.12.2002 ರಂದು ಕಬ್ಸ್ ಮತ್ತು ಬುಲ್ ಬುಲ್ಸ್ ಉತ್ಸವವನ್ನು ಶ್ರೀ ಮಹಾಬಲಶೆಟ್ಟಿ ನಿವೃತ್ತ ಪ್ರಾಂಶುಪಾಲರು ಸುಬ್ರಮಣ್ಯ ಇವರು ಉದ್ಘಾಟಿಸಿದರು.

ಸಮಾರೋಪ ಸಮಾರಂಭವು ದಿನಾಂಕ 22-12-2002 ರಂದು ಭಾನುವಾರ ಸಂಜೆ 4.00 ಗಂಟೆಗೆ ಶ್ರೀಮತಿ ಐರಿನ್ ಡಿಕುನ್ಹಾ ಜಿಲ್ಲಾ ಆಯುಕ್ತರು (ಗೈಡ್ಸ್) ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಪೂಜ್ಯ ಶ್ರೀ ಶ್ರೀ ಶ್ರೀ ಶ್ರೀ ವಿದ್ಯಾಪ್ರಸನ್ನ ತೀರ್ಥಸ್ವಾಮೀಜಿ ಶ್ರೀ ಸಂಪುಟ ನರಸಿಂಹ ಮಠ ಸುಬ್ರಮಣ್ಯ ಇವರು ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್ಸ್ ಮಕ್ಕಳಿಗೆ ಆಶೀರ್ವಚನ ನೀಡಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎಸ್. ಅಂಗಾರ, ಶಾಸಕರು ಸುಳ್ಯ, ಹಾಗೂ ಕೆ. ಸೀತಾರಾಮ ರೈ, ಸಂಚಾಲಕರು, ವಿದ್ಯಾರಶ್ಮಿ ವಿದ್ಯಾಸಂಸ್ಥೆಗಳು, ಸವಣೂರು, ಪುತ್ತೂರು ಮತ್ತು ಜಿಲ್ಲಾ ಸಂಸ್ಥೆಯು ಪದಾಧಿಕಾರಿಗಳಾದ ಶ್ರೀ ರಾಮಶೇಷಶೆಟ್ಟಿ, ಸೂಳ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶ್ರೀ ಬಿ. ಶೇಖರ, ಶ್ರೀ ಆಬೂಬ್‌ಕರ್ ಕೆಟ್ಟಕ್ಯಾರ್ಸ್, ಖಜಾಂಚಿ, ಸೂಳ್ಯ ವಾಸುದೇವ ನಡ್ಕ ಕಾರ್ಯದರ್ಶಿ, ಮುಂತಾದವರು ಉಪಸ್ಥಿತರಿದ್ದರು.

ದಿನಾಂಕ 22 ರಂದು ಸಂಜೆ 8.30ಕ್ಕೆ ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಜಿ. ದಿನೇಶ್ ಕಾಮತ್ ಪ್ರಾಂಶುಪಾಲರು, ಕೆ.ಎಸ್.ಎಸ್. ಕಾಲೇಜು ಸುಬ್ರಮಣ್ಯ ಅತಿಥಿಯಾಗಿ ಉಪಸ್ಥಿತರಿದ್ದರು. ಕೆ.ಎಸ್.ಎಸ್. ಕಾಲೇಜಿನ ಎನ್.ಎಸ್.ಎಸ್. ತಂಡದ ವಿದ್ಯಾರ್ಥಿಗಳು 'ಏಡ್ಸ್ ಬಂದೀತು ಜೋಕೆ' ಎಂಬ ನಾಟಕವನ್ನು ಅಭಿನಯಿಸಿದರು. ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳಾದ ಸರ್ವಧರ್ಮ ಪ್ರಾರ್ಥನೆ ಧ್ವಜ ಸ್ಥಂಭ ರಚನೆ, ಗ್ರೀಟಿಂಗ್ ಕಾರ್ಡ್ ರಚನೆ, ಸುಧಾರಿತ ಗುಡಾರ ತಯಾರಿ, ಶಿಬಿರೋಪಕರಣಗಳ ತಯಾರಿ, ರಸಪ್ರಶ್ನೆ ಕಾರ್ಯಕ್ರಮ ಬೆಂಕಿ ಬಳಸಿ ಅಡುಗೆ ಮಾಡುವುದು, ಅಂತ್ಯಾಕ್ಷರಿ, ಚಟುವಟಿಕೆಗಳು ನಡೆದವು. ಕಬ್ಸ್-ಬುಲ್ ಬುಲ್ಸ್ ಚಟುವಟಿಕೆಗಳಾದ ಕಬ್ ಗ್ರೀಟಿಂಗ್, ಬುಲ್ ಬುಲ್ಸ್ ರಿಂಗ್, ಧಾನ್ಯಗಳಿಂದ ಆಕೃತಿ ರಚನೆ, ಕಾಗದಗಳಿಂದ ಹೂಮಾಲೆ ರಚನೆ, ಚಿತ್ರ ರಚನೆ ಮುಂತಾದ ಕಾರ್ಯಕ್ರಮಗಳು ರ್‍ಯಾಲಿಯಲ್ಲಿ ಜರುಗಿದವು.

## ಬಂಟ್ವಾಳ ತಾಲ್ಲೂಕು

ಡಿಸೆಂಬರ್ 16 ಮತ್ತು 17 ರಂದು ಶ್ರೀ ಮಹಾಲಿಂಗೇಶ್ವರ ಕಲ್ಯಾಣ ಮಂಟಪ ಬಂಟ್ವಾಳದಲ್ಲಿ ಸ್ಕೌಟ್ ಮತ್ತು ಗೈಡ್ ರ್‍ಯಾಲಿಯನ್ನು ವಿಜೃಂಭಣೆಯಿಂದ ಆಚರಿಸಲಾಯಿತು.

ಬಂಟ್ವಾಳ ನಗರ ಪಂಚಾಯತಿ ಅಧ್ಯಕ್ಷೆ ಶ್ರೀಮತಿ ಜೊಹರಾ ಎ. ರಹಿಮಾನ್‌ರವರ ಅಧ್ಯಕ್ಷತೆಯಲ್ಲಿ, ಶ್ರೀ ಮಹಾಲಿಂಗೇಶ್ವರ ದೇವಳ ಬಂಟ್ವಾಳ ಇವರ ಆಡಳಿತ ಧರ್ಮದರ್ಶಿಗಳಾದ ಸಸ್ಮಾನ್ಯ ರಾಧಾಕೃಷ್ಣ ಸೋಮಯಾಜಿಯವರು ರ್‍ಯಾಲಿಯನ್ನು ಉದ್ಘಾಟಿಸಿ ಶುಭ ಹಾರೈಸಿದರು. ಈ ರ್‍ಯಾಲಿಯಲ್ಲಿ 626 ವಿದ್ಯಾರ್ಥಿಗಳು ಹಾಗೂ 56 ಅಧ್ಯಾಪಕರು ಭಾಗವಹಿಸಿದ್ದರು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಬಂಟ್ವಾಳ ತಾಲೂಕು ಪಂಚಾಯತ್ ಅಧ್ಯಕ್ಷರಾದ ಶ್ರೀ ಕೆ. ಪದ್ಮನಾಭ ರೈಯವರು ಮಕ್ಕಳನ್ನು



ಸನ್ಮಾನ್ಯ ಶ್ರೀ ರಾಧಾಕೃಷ್ಣ ಸೋಮಯಾಜಿಯವರು ರ್‍ಯಾಲಿಯನ್ನು ಉದ್ಘಾಟಿಸುತ್ತಿರುವುದು

ಪ್ರೋತ್ಸಾಹಿಸುವುದರೊಂದಿಗೆ ರ್‍ಯಾಲಿ ಖರ್ಚಿಗಾಗಿ ತಾಲ್ಲೋಕು ಪಂಚಾಯತ್ ನಿಧಿಯಿಂದ ಆರ್ಥಿಕ ನೆರವನ್ನು ನೀಡುವುದಾಗಿ ಘೋಷಿಸಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಕ್ಯಾಂಪ್ಕೋ ಅಧ್ಯಕ್ಷ ಹಾಗೂ ದ.ಕ. ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಆಯುಕ್ತರಾದ ಶ್ರೀ ಬಿ. ನಾಗರಾಜ ಶೆಟ್ಟಿಯವರು ಬಂಟ್ವಾಳ ಸ್ಥಳೀಯ ಸಂಸ್ಥೆಯಲ್ಲಿ ಹಲವಾರು ವರ್ಷಗಳಿಂದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿರುವ ಲ.ಡಾ. ವಸಂತ ಬಾಳಿಗಾರವರಿಗೆ THANKS BADGE ಮತ್ತು ಪ್ರಶಸ್ತಿ ಪತ್ರ ನೀಡಿ ಗೌರವಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಐ.ಎ. ಕೈರನ್ನರವರು, ಜಿಲ್ಲಾ ಸಂಸ್ಥೆಯ ಕಾರ್ಯಕ್ರಮಗಳಲ್ಲಿ ಶಕ್ತಿಮೀರಿ ಶ್ರಮಿಸುತ್ತಿರುವ ಶ್ರೀ ಮಹಮ್ಮದ್ ತುಂಬೆಯವರಿಗೆ MEDAL OF MERIT ಪ್ರಶಸ್ತಿ ಪ್ರದಾನ ಮಾಡಿ ಗೌರವಿಸಿದರು.

ಈ ಸಮಾರಂಭದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸಂಸ್ಥೆಯ ಕಾರ್ಯಾಧ್ಯಕ್ಷರಾದ ಶ್ರೀ ಬಸವೇಗೌಡ, ಶಿಕ್ಷಣ ಸಂಯೋಜಕರಾದ ಶ್ರೀ ಚಂದುನ್ಯಾಕೆ, ನಿವೃತ್ತ ಅಧ್ಯಾಪಕರಾದ ಶ್ರೀ ಅಬ್ದುಲ್ ಸಲಾಂರವರು ಉಪಸ್ಥಿತರಿದ್ದರು.

## ಹಾವೇರಿ ಜಿಲ್ಲೆ

ದಿನಾಂಕ 13.12.2002 ರಿಂದ 22.12.2002ರ ವರೆಗೆ ಶಿಗ್ಗಾಂವ ತಾಲೂಕ ಶಿಶುವಿನಹಾಳದಲ್ಲಿ ಶರೀಪ ಶಿವಯೋಗಿ ಮಠದಲ್ಲಿ ಸ್ಕೌಟ್ ಮಾಸ್ಟರ್ ಮತ್ತು ಗೈಡ್ಸ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರ ನಡೆಯಿತು. ಶಿಬಿರದಲ್ಲಿ 46 ಜನ ಸ್ಕೌಟ್ಸ್ ಮಾಸ್ಟರ್, 13 ಜನ ಗೈಡ್ ಕ್ಯಾಪ್ಟನ್ ಭಾಗವಹಿಸಿದ್ದರು. ತರಬೇತಿ ಕಾಲದಲ್ಲಿ ಜಿಲ್ಲಾ ಮುಖ್ಯ ಆಯುಕ್ತರು ಶ್ರೀ ಪ್ರಭಾಕರರಾವ್ ಮಂಗಳೂರ, ಶ್ರೀಮತಿ ಮಮತಾಜ ಬೊಮ್ಮನಹಳ್ಳಿ ಎ.ಡಿ.ಸಿ. (ಜಿ) ಶಿಗ್ಗಾಂವ್ ಡಾ।। ಎಸ್.ಕೆ. ಬೆಟದೂರ, ಶ್ರೀ ಎಂ.ಹೆಚ್. ಕಲಬುರ್ಗಿ, ಪಿ.ಇ.ಓ. ಶಿಗ್ಗಾಂವ್, ಶ್ರೀ ಬಿಡಶೆಟ್ಟರ ಪಿ.ಇ.ಓ. ಸವಣೂರ, ಶ್ರೀ ಮೆಕಳಿ ಸಿ.ಆ.ಸಿ. ಹುಲಗೂರ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಆರ್. ಪಾಟೀಲ ಭಾಗವಹಿಸಿದ್ದರು.

ತರಬೇತಿ ನಾಯಕರಾಗಿ ಸ್ಕೌಟ್ ವಿಭಾಗಕ್ಕೆ ಶ್ರೀ ಸಿ. ಸುಬ್ರಮಣ್ಯ, ಗೈಡ್ ವಿಭಾಗಕ್ಕೆ ಶ್ರೀಮತಿ ಉಮಾ ಮರಿಗೆಂಚಣ್ಣನವರ ಇವರು ಕಾರ್ಯನಿರ್ವಹಿಸಿದರು. ಭಾಗವಹಿಸಿದ್ದರು. ತರಬೇತಿ ಕಾಲದಲ್ಲಿ ಸಂತ ಶಿಶುವಿನಹಾಳ ಶರೀಫ್ ಶಿವಯೋಗಿ ಮಠದ ಎಲ್ಲ ಸದಸ್ಯರು ಚೇರಮನ್ನರು, ಶರೀಫ್ ಶಿವಯೋಗಿ ಪ್ರೌಢ ಶಾಲೆಯ ಮುಖ್ಯೋಪಾಧ್ಯಾಯರು, ಸಿಬ್ಬಂದಿ ವರ್ಗದವರು ಉತ್ತಮ ರೀತಿಯಲ್ಲಿ ಸಹಕಾರ ನೀಡಿದರು.

**ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರ :** ಹಾವೇರಿ ಜಿಲ್ಲಾ ಮಟ್ಟದ ಪ್ರೌಢ ಶಾಲೆಯ ಮಕ್ಕಳಿಗೆ ರಾಜ್ಯ ಪುರಸಾ ರ ಶಿಬಿರ ಹಾಗೂ ಪೂರ್ವ ತಯಾರಿ ಶಿಬಿರ ದಿನಾಂಕ 26.12.2002 ರಿಂದ 29.12.2002ರ ವರೆಗೆ ನಡೆಯಿತು. 29-12-2002ರವಿವಾರ ಪರೀಕ್ಷಾ

ಶಿಬಿರ ನಡೆಯಿತು. ಅದರಲ್ಲಿ 62 ಜನ ಸ್ಕೌಟ್ ಮಕ್ಕಳು ಭಾಗವಹಿಸಿದ್ದರು.

## ಬಿಜಾಪುರ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಬಸವನ ಬಾಗೇವಾಡಿಯ ಗುರು ಕೃಪಾ ಶಾಲೆಯಲ್ಲಿ ದಿನಾಂಕ 9.12.2002 ರಂದು ಒಂದು ದಿನದ ಸ್ಕೌಟ್ ಶಿಕ್ಷಕ ಹಾಗೂ ಗೈಡ್ ಶಿಕ್ಷಕಿಯರ ಸಮಾವೇಶ ನಡೆಯಿತು. ಸಮಾವೇಶದ ನಾಯಕತ್ವವನ್ನು ಶ್ರೀ ಎಸ್.ಎಸ್. ನಿಂಬಾಳ ಎ.ಎಲ್.ಟಿ.(ಎಸ್) ವಹಿಸಿದ್ದರು. ಸಹಾಯಕರಾಗಿ ಶ್ರೀ ಎಸ್.ಎಸ್. ಬೊಮ್ಮನಳ್ಳಿ ಶ್ರೀ ಪಿ.ಎಸ್. ಕುಂಬಾಕಿ ಹಾಗು ಶ್ರೀಮತಿ ನಿರ್ಮಲಾ ಕಲಶೆಟ್ಟಿ ಕಾರ್ಯನಿರ್ವಹಿಸಿದರು. ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಹೊಸಮನಿ ಸಮಾವೇಶದ ಉದ್ಘಾಟನೆ ಮಾಡಿದರು. ದಳ ನವೀಕರಣ ಸಮಾವೇಶದ ಉದ್ದೇಶ ಸಮಸ್ಯೆ ಮತ್ತು ಪರಿಹಾರ ಪಾಠ ನಿವೇದನೆ ಬಗೆಗೆ ತಿಳಿಸಿಕೊಡಲಾಯಿತು.

**ಕಂಪ್ಯೂಟರ್ ರ್‍ಯಾಲಿ :** ದಿನಾಂಕ 8.12.2002 ರಂದು ಬಿಜಾಪುರ ನಗರದಲ್ಲಿ ಕಂಪ್ಯೂಟರ್ ದಿನವನ್ನು ಎನ್.ಐ.ಐ.ಟಿ. ಯುವರು ಸ್ಕೌಟ್ಸ್ ಗೈಡ್ಸ್ ಮಕ್ಕಳೊಂದಿಗೆ ಆಚರಿಸಿದರು. ನಗರದ ಶ್ರೀ ಸಿದ್ದೇಶ್ವರ ಪ್ರೌಢ ಶಾಲೆ (ಬ) ದರಬಾರ ಪ್ರೌಢ ಶಾಲೆ ವಿ.ವಿ. ಸಂಘ ಕನ್ನಡ ಮಾಧ್ಯಮ ಶಾಲೆ ಗೆಲಾಕ್ಷಿ ಪ್ರಾಥಮಿಕ ಶಾಲೆ ಹಾಗೂ ರಾಮಪ್ಪ ಶಾಲೆಯಿಂದ 107 ಸ್ಕೌಟ್ ಗೈಡ್ ಮಕ್ಕಳು ನಗರದ ಆದರ್ಶ ನಗರ, ಜಲನಗರ, ಸೈನಿಕ ಶಾಲೆ ಹಾಗೂ ಸಿದ್ದೇಶ್ವರ ಬಡಾವಣೆಯಲ್ಲಿ ಸಂಚರಿಸಿ ಕಂಪ್ಯೂಟರ್ ಕಲಿಯಲು ಇಚ್ಛಿಸುವ ಸುಮಾರು 13,000 ಜನರ ಸಹಿ ಸಂಗ್ರಹಣೆ ಮಾಡಿದರು. ರ್‍ಯಾಲಿಯ ನೇತೃತ್ವವನ್ನು ಎನ್.ಐ.ಐ.ಟಿ.ಯ ಶ್ರೀ ಶಿವಾನಂದ ಇಂಡಿ ಶ್ರೀ ಅನಿಲ ಪಾಟೀಲ ಹಾಗು ವೀಣಾ ಪಾಟೀಲ, ಶ್ರೀ ಎಸ್.ಎಸ್. ನಿಂಬಾಳ, ಶ್ರೀ ಪಿ.ಎಸ್. ಕುಂಬಾರ್, ಶ್ರೀಮತಿ ನಿರ್ಮಲಾ ಕಲಶೆಟ್ಟಿ ವಹಿಸಿದ್ದರು. ಮಕ್ಕಳಿಗೆ ಪ್ರಮಾಣ ಪತ್ರ ವಿತವರಿಸಲಾಯಿತು.

## ಗುಲ್ಬರ್ಗಾ ಜಿಲ್ಲೆ

ಪೆಟ್ರೋಲ್ ನಾಯಕರ ತರಬೇತಿ ಹಾಗು ಸೇವಾ ಶಿಬಿರ ದಿನಾಂಕ 11.12.2002 ರಿಂದ 14.12.2002ರ ವರೆಗೆ ಜವಾಹರ ನವೋದಯ ವಿದ್ಯಾಲಯ ಭೀಮರಾಯನ ಗುಡಿಯಲ್ಲಿ ನಡೆಯಿತು. 61 ಸ್ಕೌಟ್ಸ್ ಹಾಗೂ 47 ಗೈಡ್ಸ್‌ಗಳು ಕಮಲಾಪುರ, ಶಹಾಬಾದ, ಗುಲ್ಬರ್ಗಾ ಅಫ್‌ಜಲಪೂರ್ ತಾಲೂಕುಗಳಿಂದ ಆಗಮಿಸಿದ್ದರು.

ಶಿಬಿರದ ನಾಯಕತ್ವವನ್ನು ಶ್ರೀ ಗೋಪಾಲರಾವ್ ಹಾಗೂ ಶ್ರೀಮತಿ ನಿರ್ಮಲಾ ಕಲಾಶೆಟ್ಟಿಯವರು ವಹಿಸಿದ್ದರು. ಶಿಬಿರದ ಉದ್ಘಾಟನೆಯನ್ನು ಶ್ರೀಮತಿ ಪದ್ಮಪ್ರಿಯಾ ಜಿಲ್ಲಾ ಆಯುಕ್ತರು (ಗೈಡ್ಸ್) ನೆರವೇರಿಸಿದರು. ಪೆಟ್ರೋಲ ಎಂದರೇನು, ನಾಯಕನ



ಪೆಟ್ರೋಲ್ ಲೀಡರ್ ಕ್ಯಾಂಪ್‌ನಲ್ಲಿ ಸ್ಕೌಟ್ಸ್ ಮತ್ತು ಗೈಡ್‌ಗಳಿಂದ ಧ್ವಜಾರೋಹಣ ಕಾರ್ಯಕ್ರಮ

ಅರ್ಹತೆ, ಪೆಟ್ರೋಲ ಹಾಡು, ಧ್ವಜ, ಸಿ.ಓ.ಹೆಚ್. ಪ್ರಥಮ ಚಿಕಿತ್ಸೆ, ಅಂದಾಜು, ಹೊರಸಂಚಾರ, ಶಿಬಿರದ, ಬಗೆಗೆ ವಿವರಣೆ ನೀಡಲಾಯಿತು. ಭವ್ಯಶಿಬಿರಾಗ್ನಿಯನ್ನು ಶ್ರೀ ರವಿಕುಮಾರ್ ಪ್ರಿನ್ಸಿಪಾಲರು ನವೋದಯ ವಿದ್ಯಾಲಯ ಇವರು ಉದ್ಘಾಟಿಸಿದರು.

ದಿನಾಂಕ 18.12.2002 ರಂದು ಗುಲ್ಬರ್ಗ ಜಿಲ್ಲೆಯ ಕಣಮಸ ಗೌಡ ಪಾಟೀಲ್ (ಕೆ.ಜಿ.ಪಿ) ಆಂಗ್ಲ ಮಾಧ್ಯಮ ಪ್ರೌಢಶಾಲೆ ಬಡೇಪೂರ್, ಆವರಣದಲ್ಲಿ ಗುಲಬರ್ಗಾ ಜಿಲ್ಲೆಯ ತಾಲ್ಲೂಕಿನ ಉಪಾಧ್ಯಾಯರಿಗೆ ಸ್ಕೌಟ್ ಮಾಸ್ಟರ್ ಮೂಲ ತರಬೇತಿಯನ್ನು ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಹಮ್ಮಿಕೊಳ್ಳಲಾಯಿತು. ಈ ಶಿಬಿರಕ್ಕೆ ನಾಯಕರಾಗಿ ಶ್ರೀ ಎ. ಲಕ್ಷ್ಮಣದಾಸ್ ಇವರು ಕಾರ್ಯ ನಿರ್ವಹಿಸಿದರು.

ದಿನಾಂಕ 25.12.2002 ರಂದು ಸ್ಕೌಟ್ ಶಿಬಿರದ ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದ ಜಂಟಿ ನಿರ್ದೇಶಕರು ಆದ ಶ್ರೀಯುತ ಶಂಕ್ರಯ್ಯ ಸ್ವಾಮಿ ಚಿದ್ರಿ. ಶಿಬಿರಾರ್ಥಿಗಳಿಗೆ ಹಿತವಚನ ನೀಡಿದರು. ಮತ್ತು



ಶ್ರೀ ಶಂಕ್ರಯ್ಯಸ್ವಾಮಿ ಚಿದ್ರಿ ಗುಲ್ಬರ್ಗಾ ವಿಭಾಗ ಜಂಟಿ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಶ್ರೀ ಗೋಪಾಲ್‌ರಾವ್ ರವರನ್ನು ಸನ್ಮಾನಿಸುತ್ತಿರುವುದು.

ಶ್ರೀ ಶಿವಶರಣಪ್ಪ ಮುಡ್ಡೆ ಪ್ರಾಂಶುಪಾಲರು ಇವರು ಸ್ಕೌಟ್ ಮತ್ತು ಗೈಡ್‌ನಿಂದ ಶಿಸ್ತು ಸಂಯಮವನ್ನು ಬೆಳೆಸಲು ಸಾಧ್ಯ ಎಂಬುದಾಗಿ ಹೇಳಿದರು.

## ಕೋಲಾರ ಜಿಲ್ಲೆ

ದಿನಾಂಕ 13.11.2002ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸಾಮ್ರಾಟ್ ರೋವರ್ಸ್ ತಂಡದ 13ನೇ ವಾರ್ಷಿಕೋತ್ಸವ ಹಾಗೂ ಝಾನ್ಸಿ ಮತ್ತು ಡಿಂಡೋ ರೇಂಜರ್ಸ್ ತಂಡಗಳ ಉದ್ಘಾಟನಾ ಸಮಾರಂಭವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಏರ್ಪಡಿಸಲಾಗಿತ್ತು.

ಧ್ವಜಾರೋಹಣವನ್ನು ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವೆಂಕಟರಮಣಪ್ಪನವರು ನೆರವೇರಿಸಿದರು.

ವಾರ್ಷಿಕೋತ್ಸವ ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪನವರು ವಹಿಸಿದ್ದರು. ಅವರು ಝಾನ್ಸಿ ಮತ್ತು ಡಿಂಡೋ ರೇಂಜರ್ಸ್ ತಂಡಗಳ ಉದ್ಘಾಟನೆಯನ್ನು ಜ್ಯೋತಿ ಬೆಳಗುವುದರೊಂದಿಗೆ ನೆರವೇರಿಸಿದರು.

ಇದೇ ಸಂದರ್ಭದಲ್ಲಿ ರೋವರ್ಸ್ ಮತ್ತು ರೇಂಜರ್ಸ್‌ಗಳಿಗಾಗಿ ಕಂಪ್ಯೂಟರ್ ತಂತ್ರಜ್ಞಾನ ಮಾಹಿತಿಯನ್ನು ಆರ್ಯನ್ಸ್ ಕಂಪ್ಯೂಟರ್ಸ್ ಕೋಲಾರ ಇವರು ಪ್ರಾಯೋಜಿಸಿದ್ದರು.

ಆರ್ಯನ್ಸ್ ಕಂಪ್ಯೂಟರ್ಸ್‌ನ ಮುಖ್ಯಸ್ಥರಾದ ರಾಜೇಶ್ ಸಿಂಗ್‌ರವರು ಸಾಮ್ರಾಟ್ ರೋವರ್ಸ್ ತಂಡದಿಂದ ಕಂಪ್ಯೂಟರ್ ತರಬೇತಿ ಪಡೆಯಬಯಸುವವರಿಗೆ ತರಬೇತಿ ಶುಲ್ಕ ವಿನಾಯಿತಿ

ನೀಡುವುದಾಗಿ ತಿಳಿಸಿದರು. ಕಂಪ್ಯೂಟರ್‌ನ ಬಗ್ಗೆ ಮಾಹಿತಿಯನ್ನು ಶ್ರೀ ಕೆ.ಆರ್. ಕಿರಣ್ ಮತ್ತು ನಟರಾಜ್‌ರವರು ತಿಳಿಸಿದರು.

ಈ ಸಮಾರಂಭಕ್ಕೆ ಅತಿಥಿಗಳಾಗಿ ನಗರ ಸಭೆ ಸದಸ್ಯರಾದ ತ್ಯಾಗರಾಜ್ ಭಾಗವಹಿಸಿದ್ದರು.

ಜಿಲ್ಲಾ ಸ್ಕೌಟ್ ಮತ್ತು ಗೈಡ್ ಸಂಸ್ಥೆಯಿಂದ ದಿನಾಂಕ 7.11.2002 ರಂದು ಧ್ವಜ ದಿನಾಚರಣೆಯನ್ನು ಆಚರಿಸಲಾಯಿತು. ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಡಿ.ಎನ್. ನಾಯಕ್ ಭಾ.ಆ.ಸೇ. ಇವರು ಉದ್ಘಾಟನೆಯನ್ನು ಮಾಡಿದರು. ಮುಖ್ಯ ಅತಿಥಿಗಳಾಗಿ ಶಿಕ್ಷಣ ಉಪನಿರ್ದೇಶಕರು ಶ್ರೀ ಡಿ.ಎಸ್. ರಾಜಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಪ್ರಹ್ಲಾದ ಗೌಡ, ತಹಸಿಲ್ದಾರ್, ಶ್ರೀ ಜವರೇಗೌಡ ಸಂಸ್ಥೆಯ ಖಜಾಂಚಿ ಶ್ರೀ ಬಿಸ್ಯಪ್ಪಗೌಡ ಆಜೀವ ಸದಸ್ಯರಾದ ಪತ್ರಕರ್ತ ಶ್ರೀ ಪ್ರಹ್ಲಾದರಾವ್‌ರವರು ಉಪಸ್ಥಿತರಿದ್ದರು.



ಶ್ರೀ ಡಿ.ಎನ್. ನಾಯಕ್ ಜಿಲ್ಲಾಧಿಕಾರಿಗಳು ಸ್ಕೌಟ್ಸ್ ಧ್ವಜ ದಿನದಂದು ಧ್ವಜದ ಚೀಟಿಯನ್ನು ಬಿಡುಗಡೆ ಮಾಡುತ್ತಿರುವುದು. ಚಿತ್ರದಲ್ಲಿ :- ಶ್ರೀ ಪ್ರಹ್ಲಾದ ಗೌಡರು ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀ ಡಿ.ಎಸ್. ರಾಜಣ್ಣ ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಕೋಲಾರ ಶ್ರೀ ಕೆ.ವಿ. ಶಂಕರಪ್ಪ ಜಿಲ್ಲಾಮುಖ್ಯ ಆಯುಕ್ತರು ಮತ್ತು ಶ್ರೀಮತಿ ಕೆ.ಆರ್. ಜಯಶ್ರೀ, ಗೈಡ್ಸ್ ಆಯುಕ್ತರು

## ಸಮುದಾಯ ಅಭಿವೃದ್ಧಿ ಕಾರ್ಯಕ್ರಮ

ದಿನಾಂಕಃ 9.11.2002 ರಂದು ಬೆಳಿಗ್ಗೆ 9 ಗಂಟೆಗೆ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಹಾಗೂ ವರಸಿದ್ಧವಿನಾಯಕ ಸಮಿತಿ ಕುವೆಂಪು ನಗರ ನಿವಾಸಿಗಳ ಸಂಯುಕ್ತಾಶ್ರಯದಲ್ಲಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮ ನಡೆಸಿದರು. ಈ ಸಂದರ್ಭದಲ್ಲಿ ನಗರ ಸಭೆ ಅಧ್ಯಕ್ಷರಾದ ಶ್ರೀಮತಿ ಗಿರಿಜಮ್ಮ ರಾಮಸ್ವಾಮಿಯವರು ಕಳೆಕೀಳುವುದರೊಂದಿಗೆ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಸ್ಕೌಟ್ ಸಂಸ್ಥೆಯ ಶ್ರೀ ವೆಂಟಕರಮಣಪ್ಪ, ಶ್ರೀಮತಿ ಕೆ.ಆರ್. ಜಯಶ್ರೀ, ಕು|| ಶಬಾನತಬಸೂಮ್, ಶ್ರೀ ಕೆ.ಆರ್. ಸುರೇಶ, ಪತ್ರಕರ್ತ ಪ್ರಹ್ಲಾದರಾವ್, ವರಸಿದ್ಧವಿನಾಯಕ ಸಮಿತಿಯ ಅಧ್ಯಕ್ಷರಾದ ಕ್ರಿಷ್ಣಾರೆಡ್ಡಿ, ಕಾರ್ಯದರ್ಶಿ ಚನ್ನಪ್ಪ, ಹರ್ಷ, ಚಂದ್ರಪ್ಪ ವಲಯ ಅರಣ್ಯ ಇಲಾಖೆಯ ರಂಗನಾಥಸ್ವಾಮಿ ನಗರ ಸಭೆ ಸದಸ್ಯ ಕೆ.ಎಸ್. ತ್ಯಾಗರಾಜು ಭಾಗವಹಿಸಿದ್ದರು. ಶಾಲೆಗಳ ಸ್ಕೌಟ್ಸ್ ಗೈಡ್ಸ್ ಮಕ್ಕಳು ಶಿಕ್ಷಕರು, ಝಾನ್ಸಿ ರೇಂಜರ್ಸ್ ಅಭಿಮನ್ಯುರೋವರ್ಸ್, ಸಾಮ್ರಾಟ್ ರೋವರ್ಸ್ ಶುಚಿತ್ವ ಕಾರ್ಯ ನೆರವೇರಿಸಿದರು. ಶ್ರೀ ಕೆ.ವಿ. ಶಂಕರಪ್ಪ ಮುಖ್ಯ ಆಯುಕ್ತ ಸ್ವಾಗತಿಸಿ, ಶ್ರೀ ಡಬ್ಲ್ಯೂ.ಇ.ಎಸ್. ಕುಮಾರ್ ಕಾರ್ಯದರ್ಶಿಗಳು ಕಾರ್ಯಕ್ರಮ ನಿರ್ವಹಣೆಯನ್ನು ವಹಿಸಿದ್ದರು.

## ಬೆಳಗಾವಿ ಜಿಲ್ಲಾ

ಬೆಳಗಾಂ ಜಿಲ್ಲಾ ಸಂಸ್ಥೆ ಇವರು ಧಾರವಾಡ ಜಿಲ್ಲಾ ಸಸ್ಯಚೇತನ ತರಬೇತಿ ಕೇಂದ್ರ ದಡ್ಡಿ ಕಮಲಾ ಪುರದಲ್ಲಿ ದಿನಾಂಕ 26.12.2002 ರಿಂದ 4.1.2003ರ ವರೆಗೆ 2 ಮೂಲ ಸ್ಕೌಟ್ ಮಾಸ್ಟರ್

ಹಾಗೂ ಒಂದು ಬೇಸಿಕ್ ರೋವರ್ ಲೀಡರ್ ತರಬೇತಿ ಶಿಬಿರವನ್ನು ಏರ್ಪಡಿಸಿದ್ದರು. ಶ್ರೀ ಜಿ.ಎ. ನರಗುಂದ ಎಲ್.ಟಿ.(ಎಸ್) ಶ್ರೀ ಮಂಜುನಾಥಚಾರ್ ಎ.ಎಲ್.ಟಿ.(ಎಸ್) ಶ್ರೀ ಸುಬ್ರಮಣ್ಯ ಶಾಸ್ತ್ರಿ ಎ.ಎಲ್.ಟಿ.(ಆರ್) ನಾಯಕರಾಗಿದ್ದರು. ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರು ಶಿಬಿರಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಗಳನ್ನು ಮಾಡಿ ಪ್ರೋತ್ಸಾಹಿಸಿದರು. ದಿನಾಂಕ 3.1.2003 ರಂದು ಸಂಜೆ 4.00 ಘಂಟೆಗೆ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಬೆಳಗಾವಿ ಜಿಲ್ಲಾ ಪಂಚಾಯತ್‌ನ ಉಪಾಧ್ಯಕ್ಷರಾದ ಶ್ರೀ ಪರಪ್ಪ ಮ. ಜಂಗವಾಡರವರು ವಹಿಸಿದ್ದು, ಮಾನ್ಯ ಶ್ರೀ ಸಣ್ಣಗೌಡ ದೊಡ್ಡಗೌಡ್ರು ಜಿಲ್ಲಾ ಪಂಚಾಯತ್ ಸದಸ್ಯರು ಬೆಳಗಾಂ, ಶ್ರೀ ನಾರಾಯಣಶೆಟ್ಟಿ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್) ಎಸ್.ಎ. ಉಮರಾಣಿ ದೈಹಿಕ ಶಿಕ್ಷಣ ಸಂಯೋಜಕರು ಮೂಡಲಗಿ, ಶ್ರೀ ಎಂ.ಎಂ. ಲೋಂಡೆ ಜಿಲ್ಲಾ ಮುಖ್ಯ ಆಯುಕ್ತರು ದಾರವಾಡ ಮುಖ್ಯ ಅತಿಥಿಗಳಾಗಿದ್ದು ಮಾತನಾಡಿದರು. ಶ್ರೀ ಬಿ.ಎಂ. ನಿಡೋಣಿ ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಮೂಡಲಗಿ ಇವರು ಎಲ್ಲರನ್ನು ಸ್ವಾಗತಿಸಿದರು.

## ಧಾರವಾಡ ಜಿಲ್ಲೆ

ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜು ದೇವಿ ಕೊಪ್ಪ ತಾ. ಕಲಘಟಗಿಯಲ್ಲಿ ದಿನಾಂಕ 23.12.2002 ರಂದು ಶ್ರೀ ಕೆ.ಎಸ್. ಬೆಳವಡಿ ಪ್ರಾಚಾರ್ಯರು ಇವರ ಅಧ್ಯಕ್ಷತೆಯಲ್ಲಿ ಸ್ಕೌಟ್ ಮತ್ತು ಗೈಡ್ ದಳ ಪ್ರಾರಂಭವಾಯಿತು. ಶ್ರೀ ಜಿ.ಎ. ನರಗುಂದ ಲೀಡರ್ ಟ್ರೈನರ್ (ಸ್ಕೌಟ್) ಧಾರವಾಡ ಶ್ರೀ ಗೂಳಪ್ಪ ಬೇರೂಡಗಿ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಶಿಸ್ತು ಸಂಯಮ ಸೇವಾ ಮನೋಭಾವನೆಯನ್ನು ಜೀವನದಲ್ಲಿ ಬೆಳಸಿಕೊಳ್ಳಲು ತಿಳಿಸಿದರು. ಶ್ರೀಮತಿ ಎಂ.ಎಂ. ಮಸ್ಕರೇನಸ್ ಗೈಡ್ ಕ್ಯಾಪ್ಟನ್‌ರವರು ಎಲ್ಲರನ್ನು ವಂದಿಸಿದರು.

ದಿನಾಂಕ 8.1.2003ರಂದು ಸಂಜೆ 4.00 ಘಂಟೆಗೆ ಸಸ್ಯ ಚೇತನ ಜಿಲ್ಲಾ ತರಬೇತಿ ಕೇಂದ್ರದಲ್ಲಿ ಜಿಲ್ಲಾ ಪುರಸ್ಕಾರ ಪ್ರಶಸ್ತಿ ವಿತರಣಾ ಸಮಾರಂಭ ನಡೆಯಿತು. ಶ್ರೀ ಕೆ.ಎಸ್. ನಿಂಗಪ್ಪ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಮತ್ತು ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರು ಇವರು ಆಗಮಿಸಿ ಪ್ರಶಸ್ತಿ ವಿತರಿಸಿದರು. ಶ್ರೀ ಎಂ.ಎಂ. ಲೋಂಡೆ ಜಿಲ್ಲಾ ಮುಖ್ಯ ಆಯುಕ್ತರು ಸಮಾರಂಭವನ್ನು ಏರ್ಪಡಿಸಿದ್ದರು.

## ರಾಯಚೂರು ಜಿಲ್ಲೆ

ದಿನಾಂಕ 31.12.2002 ರಂದು ಬೆಳಿಗ್ಗೆ ಠ್ಯಾಗೂರಾ ಸ್ಮಾರಕ ಸಭಾಭವನ (ಬಿ.ಎಡ್. ಕಾಲೇಜ್) ರಾಯಚೂರಿನಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್ಸ್ ಗೈಡರ್ಸ್‌ಗಳ ಸಮಾವೇಶ ನಡೆಯಿತು. 75 ಸ್ಕೌಟರ್ಸ್ ಗೈಡರ್ಸ್‌ಗಳು ಭಾಗವಹಿಸಿದ್ದರು ಶ್ರೀ ಎಚ್. ಜಯಪ್ಪ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ರಾಯಚೂರು ಶ್ರೀಮತಿ ಪಾತಿಮಾ ಕ್ಷೇತ್ರ ಶಿಕ್ಷಣಾಧಿಕಾರಿಗಳು ಶ್ರೀ ಎನ್.ಕೆ. ಕುಲಕರ್ಣಿ ರಾಜ್ಯ ಪ್ರಶಸ್ತಿ ವಿಜೇತರು, ಶ್ರೀ ಜಂಬಣ್ಣ ಅಮರ ಚಿಂತ ರಾಜ್ಯ ಪ್ರಶಸ್ತಿ ವಿಜೇತರು, ಶ್ರೀ ಕೆ. ರಾಮಕೃಷ್ಣ ಜಿಲ್ಲಾ ಪ್ರಶಸ್ತಿ ವಿಜೇತರು, ಶ್ರೀ ಎನ್. ನರಸಪ್ಪ ಹಿರಿಯ ಉಪನ್ಯಾಸಕರು ಡೆಯೆಟ್ ಇವರುಗಳನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು. ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಆರ್. ನರಸಿಂಹಮೂರ್ತಿ ಡಿ.ಸಿ.(ಎಸ್) ಶ್ರೀಮತಿ ಕವಿತಾ ಪಾಟೀಲ್ ಡಿ.ಸಿ.(ಗೈ) ಸಮಾರಂಭವನ್ನು ವ್ಯವಸ್ಥಿತವಾಗಿ ಸಂಘಟಿಸಿದರು.

## ತಾಲ್ಲೂಕು ಮಟ್ಟದ ಮೇಳ ಅರಸೀಕೆರೆ

ದಿನಾಂಕ 23 ಮತ್ತು 24ನೇ ಡಿಸೆಂಬರ್ 2002 ರಂದು ಅರಸೀಕೆರೆ ಸ್ಥಳೀಯ ಸಂಸ್ಥೆ ಇವರ ಆಶ್ರಯದಲ್ಲಿ ಶ್ರೀ ಬಸವ ರಾಜೇಂದ್ರ ಪ್ರೌಢಶಾಲೆ ಆವರಣದಲ್ಲಿ ಸ್ಕೌಟ್ಸ್ ಗೈಡ್ಸ್, ಕಬ್ಸ್ ಮತ್ತು ಬುಲ್ ಬುಲ್ಸ್ ಮೇಳ ನಡೆಯಿತು. ಸುಮಾರು 650 ಮಕ್ಕಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಅರಸೀಕೆರೆ ಗುರುಭವನದಲ್ಲಿ 23.12.2002 ರಂದು ಶ್ರೀ ವೀರಭದ್ರಪ್ಪ ಅಧ್ಯಕ್ಷರು ಪಿ.ಎಲ್.ಡಿ. ಬ್ಯಾಂಕ್ ಅರಸೀಕೆರೆ ಇವರು ಸಮಾರಂಭವನ್ನು ಉದ್ಘಾಟಿಸಿದರು ಸಮಾರಂಭದಲ್ಲಿ ಶ್ರೀ ಜಿ.ಎಸ್. ಚಂದ್ರಶೇಖರ್ ಪಿ.ಎಲ್.ಡಿ. ಬ್ಯಾಂಕ್ ಮಾಜಿ ಸದಸ್ಯರು ಉಪಸ್ಥಿತರಿದ್ದರು. ಶ್ರೀ ಎಂ.ಎ. ಚೆಲ್ಲಯ್ಯ ಕೇಂದ್ರ ಕಛೇರಿ ಆಯುಕ್ತರು ಸಾರ್ವಜನಿಕ ಸಂಪರ್ಕ ಇವರು ಉಪಸ್ಥಿತರಿದ್ದು ಮಕ್ಕಳನ್ನುದ್ದೇಶಿಸಿ ಮಾತನಾಡಿದರು.

ಸಂಜೆ ನಡೆದ ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ಎಂ.ಎಂ. ಕಾಂತರಾಜು ಕ್ಷೇತ್ರ ಶಿಕ್ಷಣಾಧಿಕಾರಿಗಳು ಅರಸೀಕೆರೆ ಇವರು ಉದ್ಘಾಟಿಸಿದರು. ಶ್ರೀ ಪ್ರಭಾಕರ ಭಟ್ ಮತ್ತು ಶ್ರೀಮತಿ ಕೆ.ಕೆ. ಲೀಲಾ ಎ.ಎಸ್.ಓ.ಸಿ. ಇವರುಗಳು ಕಾರ್ಯಕ್ರಮವನ್ನು ಸಂಘಟಿಸಿದರು.

## ಚನ್ನರಾಯಪಟ್ಟಣ ಸ್ಥಳೀಯ ಸಂಸ್ಥೆಯ ಹೊಸ ಆಯಾಮ

ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ಸ್ಥಳೀಯ ಸಂಸ್ಥೆಯುವರು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜಯಕುಮಾರರವರ ಮುಂದಾಳತ್ವದಲ್ಲಿ ಪ್ರತಿ ತಿಂಗಳು 20ನೇ ತಾರೀಖಿನಂದು ತಾಲ್ಲೂಕಿನ ಎಲ್ಲಾ ಸ್ಕೌಟರ್ ಮತ್ತು ಗೈಡರ್ಸ್‌ಗಳು ಸರ್ಕಾರಿ ಮಾಧ್ಯಮಿಕ ಶಾಲೆ, ಕೃಷ್ಣರಾಜೇಂದ್ರ ವೃತ್ತ, ಚನ್ನರಾಯಪಟ್ಟಣ ಇಲ್ಲಿ ಕಡ್ಡಾಯವಾಗಿ ಸಮಾವೇಶಗೊಳ್ಳಲು ಆದೇಶ ಹೊರಡಿಸಿರುತ್ತಾರೆ. ಇದರಿಂದಾಗಿ ಪ್ರತಿ ತಿಂಗಳು 20ನೇ ತಾರೀಕು ತಾಲ್ಲೂಕಿನ ಎಲ್ಲಾ ಸ್ಕೌಟರ್ ಗೈಡರ್‌ಗಳು ಸಮಾವೇಶದಲ್ಲಿ ಪಾಲ್ಗೊಂಡು ಸ್ಕೌಟಿಂಗ್ ಗೈಡಿಂಗ್‌ನ ಬೆಳವಣಿಗೆ ಬಗ್ಗೆ ಚರ್ಚಿಸಿ ವಿಚಾರ ವಿನಿಮಯ ನಡೆಸುತ್ತಿದ್ದು ಇದರಿಂದ ಸ್ಕೌಟ್ ಗೈಡ್‌ಗಳ ಪ್ರಗತಿಗೆ ಮಹತ್ವದ ಹೆಜ್ಜೆಯನ್ನು ಇಟ್ಟಿದ್ದಾರೆ. ಇದು ಬಹಳಷ್ಟು ಯಶಸ್ವಿಯಾಗಿ ನಡೆಯುತ್ತಿದ್ದು ಸಂಬಂಧಪಟ್ಟವರಿಗೆಲ್ಲ ಅಭಿನಂದನೆಗಳು.

20.12.2002 ರಂದು ಸಭೆಯಲ್ಲಿ ಶ್ರೀ ಹೆಚ್.ಎಂ. ಗೌಡಯ್ಯ ಜಿಲ್ಲಾ ಸಹಾಯಕ ಆಯುಕ್ತರು (ಸ್ಕೌ) ಮತ್ತು ಪಟ್ಟಣ ನಗರ ಸಭೆ ಸದಸ್ಯರು ಶ್ರೀ ಜಯರಾಮ್ ಖಜಾಂಚಿ, ಶ್ರೀ ದೇವರಾವ್ ಜಂಟಿ ಕಾರ್ಯದರ್ಶಿ, ಶ್ರೀ ಮಂಜುನಾಥ್, ಶ್ರೀ ಪಿ. ಕೃಷ್ಣಯ್ಯಗೌಡ ಮುಖ್ಯೋಪಾಧ್ಯಾಯರುಗಳು ಮತ್ತು ಹೆಚ್.ಡಬ್ಲ್ಯೂ.ಬಿ. ಹೋಲ್ಡರ್ಸ್ ಇವರುಗಳು ಕಾರ್ಯಕ್ರಮದಲ್ಲಿ ಪಾಲ್ಗೊಂಡರು.

## ಸಕಲೇಶಪುರ ತಾಲ್ಲೂಕು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಸಕಲೇಶಪುರ ಹಾಗೂ ಬಿ. ಸಿದ್ದಣ್ಣಯ್ಯ ಪ್ರೌಢಶಾಲೆ, ಬಾಳುಪೇಟೆ ಇವರ ಸಂಯುಕ್ತ ಆಶ್ರಯದಲ್ಲಿ ಸಕಲೇಶಪುರ ತಾಲೂಕು ಸ್ಕೌಟ್ಸ್ ಗೈಡ್ಸ್ ಕಬ್ಸ್ ಬುಲ್ ಬುಲ್ಸ್ ಮೇಳ ದಿನಾಂಕ 7.1.03 ರಂದು ಸಿದ್ದಣ್ಣಯ್ಯ ಪ್ರೌಢಶಾಲೆ, ಬಾಳುಪೇಟೆ ಇಲ್ಲಿ ಜರಗಿತು.

ರ್‍ಯಾಲಿಯ ಧ್ವಜವಂದನಾ ಕಾರ್ಯಕ್ರಮವು ಸ್ಥಳೀಯ ಸಂಸ್ಥೆಯ ಗೌರವ ಅಧ್ಯಕ್ಷರಾದ ಶ್ರೀ ಬಿ. ಶಾಂತರಾಜುರವರ ಸಮ್ಮುಖದಲ್ಲಿ ನೆರವೇರಿತು. ರ್‍ಯಾಲಿಯ ಉದ್ಘಾಟನಾಸಮಾರಂಭ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀಮತಿ ಗೌಶಿಯಾ ಬೇಗಂರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಶ್ರೀನಿವಾಸ್ ಜಿಲ್ಲಾ

ಪಂಚಾಯತ್ ಸದಸ್ಯರು ಸಕಲೇಶಪುರ ಇವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಶ್ರೀ ಎ.ವಿ. ರಮೇಶ್. ಸಹಾಯಕ ಜಿಲ್ಲಾ ಆಯುಕ್ತರು (ಗೈ) ಶ್ರೀಮತಿ ಗೀತಾಮೂರ್ತಿ, ಶ್ರೀಮತಿ ಲೀಲಾ ಸ್ವರೂಪ್, ಎಂ. ಪ್ರಭಾಕರ ಭಟ್ ಎ.ಎಸ್.ಓ.ಸಿ. (ಸ್ಕೌ) ಇವರುಗಳು ಅತಿಥಿಗಳಾಗಿ ಭಾಗವಹಿಸಿದ್ದರು. ರ್‍ಯಾಲಿ ನಿರ್ದೇಶಕ ಶ್ರೀ ಸಿ.ಪಿ. ಹುಚ್ಚೇಗೌಡ, ಸ್ವಾಗತಿಸಿದರು.

ಶಿಬಿರದ ಸಮಾರೋಪಸಮಾರಂಭ ಶ್ರೀ ಯು.ಎಸ್. ಪರಮೇಶ್ವರ್ ಜಿಲ್ಲಾ ಆಯುಕ್ತರು (ಸ್ಕೌ) ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಬಿ.ಡಿ. ಬಸವಣ್ಣ ಬಾಳುಪೇಟೆ, ಶ್ರೀಮತಿ ಶಾರದಾಗುರು ಮೂರ್ತಿ ಸಹಾಯಕ ಜಿಲ್ಲಾ ಆಯುಕ್ತರು (ಗೈ), ಶ್ರೀ ಚಕ್ರಪಾಣಿ ದೈ. ಶಿಕ್ಷಣ ಸಂಯೋಜಕರು ಇವರುಗಳು ಅತಿಥಿಗಳಾಗಿ ಭಾಗವಹಿಸಿದ್ದರು.

ತಾಲೂಕಿನ ವಿವಿಧ ಶಾಲೆಗಳಿಂದ 452 ಸ್ಕೌಟ್ಸ್ ಗೈಡ್ಸ್, ಕಬ್ಸ್ ಬುಲ್ ಬುಲ್ಸ್ ವಿದ್ಯಾರ್ಥಿಗಳು ಭಾಗವಹಿಸಿದ್ದರು. ನಗರ ಮೆರವಣಿಗೆ, ಕರಕುಶಲ ವಸ್ತುಗಳ ತಯಾರಿ, ಸುಧಾರಿತ ಗುಡಾರ ತಯಾರಿ, ಧ್ವಜ ಸ್ತಂಭ ರಚನೆ, ಸಾಂಸ್ಕೃತಿಕ ಚಟುವಟಿಕೆಗಳು ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು.

## ಸ್ಕೌಟ್ಸ್ ಗೈಡ್ಸ್ ಶಿಕ್ಷಕ ಶಿಕ್ಷಕಿಯರ ತರಬೇತಿ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಮಟ್ಟದ ಸ್ಕೌಟ್ಸ್, ಗೈಡ್ಸ್ ಕಬ್ಸ್, ಶಿಕ್ಷಕ ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರವನ್ನು ಹತ್ತು ದಿನಗಳ ಕಾಲ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ (ಜಲಾಶಯ) ಗೊರೂರು ಇಲ್ಲಿ ಸಂಘಟಿಸಲಾಯಿತು.

ಶಿಬಿರದ ಸಮಾರೋಪ ಸಮಾರಂಭವು ಯು.ಎಸ್. ಪರಮೇಶ್ವರ್, ಜಿಲ್ಲಾ ಸ್ಕೌಟ್ ಆಯುಕ್ತರು ಅವರು ಅಧ್ಯಕ್ಷತೆಯಲ್ಲಿ ನಡೆಯಿತು. ಎಂ.ಎ. ಚೆಲ್ಲಯ್ಯ (ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರು (ಸ್ಕೌ) ರವರು ಸಮಾರೋಪ ಭಾಷಣ ಮಾಡಿದರು. ಡಾ. ವೈ.ಎಸ್. ವೀರಭದ್ರಪ್ಪ, ಖಜಾಂಚಿ, ಜಿಲ್ಲಾ ಸಂಸ್ಥೆ, ಹಾಸನ, ಗುರುರಾಜ ಶೆಟ್ಟಿ, ಎಂ.ಎಂ. ಗೌಡಯ್ಯ, ಸಹಾಯಕ ಜಿಲ್ಲಾ ಆಯುಕ್ತರು, ಚೆನ್ನರಾಯಪಟ್ಟಣ, ಶ್ರೀಮತಿ ರೇಣುಕಾ ಪ್ರಭು, ಜಿಲ್ಲಾ ಗೈಡ್ಸ್ ಆಯುಕ್ತರು ಇವರುಗಳು ಅತಿಥಿಗಳಾಗಿ ಭಾಗವಹಿಸಿದ್ದರು. ಎಂ. ಪ್ರಭಾಕರ್ ಭಟ್, ಸ್ಕೌಟ್ ತರಬೇತಿ ಶಿಬಿರದ ನಾಯಕರು ಶಿಬಿರದ ವರದಿ ನೀಡಿದರು. ಕೃಷ್ಣೇಗೌಡ, ಆಲೂರು, ಚಂದ್ರಾಚಾರ್ ಹಾಸನ, ರೇವತಿ ಅರಸೀಕೆರೆ, ಶಿಬಿರದ ಅನಿಸಿಕೆ ತಿಳಿಸಿದರು. ಜಿಲ್ಲಾ ಕಾರ್ಯದರ್ಶಿ ಎ.ವಿ. ರಮೇಶ್ ವಂದಿಸಿದರು. ಜವರಯ್ಯ ಸಹ ಕಾರ್ಯದರ್ಶಿ ಸ್ವಾಗತಿಸಿದರು. ಮಂಜೇಗೌಡ ಕಾರ್ಯಕ್ರಮ ನಿರ್ವಹಿಸಿದರು. ಸ್ಥಳೀಯರಾದ ಜನಾರ್ಧನ್, ಶಾಲಾ ಮುಖ್ಯೋಪಾಧ್ಯಾಯಿನಿ ಪ್ರೇಮಾವತಿ, ಗೈಡ್ಸ್ ಶಿಬಿರದ ನಾಯಕಿ ಶ್ರೀಮತಿ ಕೆ.ಕೆ. ಲೀಲಾ, ಕಬ್ಸ್ ತರಬೇತಿ ಶಿಬಿರದ ನಾಯಕಿ ಕುಮಾರಿ ಜುಲಿಯಾನ್ ಲಸ್ರಾದೋ ಮಂಗಳೂರು ಇವರುಗಳು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಗೈಡ್ಸ್ ಶಿಕ್ಷಕಿಯರ ತರಬೇತಿ ಶಿಬಿರವನ್ನು ಗೊರೂರು ಹೇಮಾವತಿ ಜಲಾಶಯದ ಸೂಪರಿಂಟೆಂಡಿಂಗ್ ಇಂಜಿನಿಯರ್, ಪಾಂಡುರಂಗ ಅವರು ಉದ್ಘಾಟಿಸಿದರು. ಜಿಲ್ಲಾ ಗೈಡ್ಸ್ ಆಯುಕ್ತರು ಶ್ರೀಮತಿ ರೇಣುಕಾ ಪ್ರಭು ಅಧ್ಯಕ್ಷತೆ ವಹಿಸಿದ್ದರು. ಸ್ಕೌಟ್ಸ್, ಕಬ್ಸ್ ಶಿಕ್ಷಕರ ಪ್ರಾಥಮಿಕ ತರಬೇತಿ ಶಿಬಿರವನ್ನು ಶ್ರೀ ಹೆಚ್.ಎಂ. ಶಿವಣ್ಣ ಮಾಜಿ ಜಿಲ್ಲಾ ಸ್ಕೌಟ್ ಆಯುಕ್ತರು ಉದ್ಘಾಟಿಸಿದರು. ಹಾಸನ

ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿ ಶಿವೇಗೌಡರವರು ಶಿಬಿರಕ್ಕೆ ಭೇಟಿ ನೀಡಿ ತಮ್ಮ ಮೆಚ್ಚುಗೆ ತಿಳಿಸಿದರು.

ತರಬೇತಿಯಲ್ಲಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಂದ 65 ಶಿಕ್ಷಕ ಶಿಕ್ಷಕಿಯರು ಹಾಗೂ ಮೂವರು ಸ್ವಯಂ ಸೇವಾಸಕ್ತ ಮಹಿಳೆಯರೂ ಭಾಗವಹಿಸಿ ತರಬೇತಿ ಪಡೆದರು. ಪಿ.ಕೆ. ತಿಮ್ಮಪ್ಪ, ಕೆ.ಎ. ಉಮೇಶ್, ಜವರಯ್ಯ, ಎಂ.ಎಸ್. ಪ್ರಕಾಶ್, ಸಿಸ್ಟರ್ ಲೀನಾ ಡಾಯಿಸ್, ಎಲ್.ಟಿ. ಲೋಕೇಶ್, ಭರತ್ ಕೃಷ್ಣೇಗೌಡ, ನಾರಾಯಣ ಶೆಟ್ಟಿ ಡಿ.ಎಸ್. ಮಂಜುನಾಥ್ ತರಬೇತಿ ಶಿಬಿರದಲ್ಲಿ ತರಬೇತುದಾರರಾಗಿ ಭಾಗವಹಿಸಿದ್ದರು.

## ಹೊಸಪೇಟೆ ತಾಲ್ಲೂಕು

ದಿನಾಂಕ 21-12-2002ರ ಶನಿವಾರದಂದು ಹೊಸಪೇಟೆ ತಾಲೂಕು ಮಟ್ಟದ ಸ್ಕೌಟ್ಸ್ ಗೈಡ್ಸ್ ಮೇಳವನ್ನು ಏರ್ಪಡಿಸಲಾಗಿತ್ತು. ಈ ಮೇಳವನ್ನು ಸ್ಥಳೀಯ ಪುಣ್ಯ ಮೂರ್ತಿ ರಾಘಪ್ಪ ಶೆಟ್ಟಿ ಸ.ಮಾ.ಹಿ. ಪ್ರಾ. ಶಾಲೆಯಲ್ಲಿ ಆಯೋಜಿಸಲಾಗಿತ್ತು. ತಾಲೂಕಿನ ವಿವಿಧ ಶಾಲೆಗಳಿಂದ 248 ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್ ಬುಲ್ಸ್‌ಗಳು ಭಾಗವಹಿಸಿದ್ದರು. ಈ ಮೇಳದ ನಾಯಕರಾಗಿ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಪಿ. ಮಂಜುನಾಥರವರು ಗೈಡ್ಸ್ ವಿಭಾಗಕ್ಕೆ ಶ್ರೀಮತಿ ಟಿ. ಲೀಲಾರವರು ಕಾರ್ಯನಿರ್ವಹಿಸಿದರು.


ವಿವಿಧ ವಸ್ತುಗಳನ್ನು ರಚಿಸಿ ಪ್ರದರ್ಶಿಸುತ್ತಿರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು

ಈ ಮೇಳವನ್ನು ಸಾಂಕೇತಿಕವಾಗಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಹಾಗೂ ತಾಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಮಂಟೇಲಿಂಗಾಚಾರ್‌ರವರು ಉದ್ಘಾಟಿಸಿದರು. ನಂತರ ನಗರದ ಪ್ರಮುಖ ಬೀದಿಗಳಲ್ಲಿ ಪಥ ಸಂಚಲನವನ್ನು ಏರ್ಪಡಿಸಲಾಗಿತ್ತು. ಪಥ ಸಂಚಲನದ ನಂತರ ಗುಂಪುಗಳಾಗಿ ವಿಂಗಡಿಸಿ ಚಿತ್ರ ತೆಗೆಯುವುದು ಬಣ್ಣ ಹಾಕುವುದು ಮಾದರಿ ತಯಾರಿಸುವುದು ಮುಂತಾದ ಕರಕುಶಲತೆಯನ್ನು ಹೊರಹೊಮ್ಮಿಸಲು ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ಮಕ್ಕಳು ತಯಾರಿಸಿದ ವಸ್ತುಗಳನ್ನು ಪ್ರದರ್ಶನಕ್ಕೆ ಇಡಲಾಗಿತ್ತು. ವೀಕ್ಷಿಸಿದ ಸಾರ್ವಜನಿಕರು ಮತ್ತು ಪಾಲಕರು ಮೆಚ್ಚುಗೆ ವ್ಯಕ್ತಪಡಿಸಿದರು. ಶಿಕ್ಷಣ ಸಂಯೋಜಕರಾದ ಶ್ರೀ ರಾಮಚಂದ್ರ ಇವರು ಈ ಪ್ರದರ್ಶನವನ್ನು ಉದ್ಘಾಟಿಸಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

ನಂತರ ಸಂಚಾರಿ ಪೋಲಿಸ್ ಠಾಣೆಯ ಸಿಬ್ಬಂದಿಗಳಾದ ಶ್ರೀ ಲಕ್ಷ್ಮೀಪತಿ ಹಾಗೂ ಸಂಜೀವಪ್ಪನವರು ಮಕ್ಕಳಿಗೆ ಸಂಚಾರ ನಿಯಂತ್ರಣ ಗುರುತುಗಳನ್ನು ಪ್ರಾಯೋಗಿಕವಾಗಿ ತೋರಿಸುವುದರೊಂದಿಗೆ ರಸ್ತೆಯಲ್ಲಿ ಮಕ್ಕಳು ಚಲಿಸುವಾಗ ಅನುಸರಿಸಬೇಕಾದ ನಿಯಮಗಳು ಮತ್ತು ಸುರಕ್ಷತಾ ಕ್ರಮಗಳನ್ನು ವಿವರಿಸಿದರು. ಈ ಚಟುವಟಿಕೆಯಲ್ಲಿ ಮಕ್ಕಳು ಅತ್ಯಂತ ಉತ್ಸಾಹದಿಂದ ಪಾಲ್ಗೊಂಡರು. ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಸನ್ಮಾನ್ಯ ಶ್ರೀ ಸೂರ್ಯನಾರಾಯಣ ತಾಲೂಕು ಪಂಚಾಯತ್ ಅಧ್ಯಕ್ಷರು ವಹಿಸಿದ್ದರು. ತಮ್ಮ ಭಾಷಣದಲ್ಲಿ ಸ್ಕೌಟಿಂಗ್

- ಗೈಡಿಂಗ್ ದೇಶಭಕ್ತಿ - ದೈವಭಕ್ತಿ, ನಿಸ್ವಾರ್ಥ ಸೇವಾ ಮನೋಭಾವನೆ ಹೊಂದಿದ ಸಂಸ್ಥೆಯಾಗಿದ್ದು, ಉತ್ತಮ ನಾಗರಿಕರ ತಯಾರಿಕೆ ಇಲ್ಲಿ ಆಗುತ್ತಿರುವುದು ಸಂತೋಷದ ಸಂಗತಿ, ಇವರ ಬೆಳವಣಿಗೆಗೆ ನನ್ನೆಲ್ಲಾ ಸಹಾಯ ಸಹಕಾರ ಕೊಡಲು ಸಿದ್ಧ ಎಂದು ನುಡಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಮಂಟೇ ಲಿಂಗಾಚಾರ್, ಕ್ಷೇತ್ರ ಶಿಕ್ಷಣಾಧಿಕಾರಿಗಳು, ತಮ್ಮ ಭಾಷಣದಲ್ಲಿ ಇಂದಿನ ಸ್ಥಿತಿಯಲ್ಲಿ ಉತ್ತಮ ವಿದ್ಯಾರ್ಥಿಗಳ ಕೊರತೆ ಇದೆ. ಆದರೆ ಸ್ಕೌಟಿಂಗ್ - ಗೈಡಿಂಗ್ ಉತ್ತಮ ವಿದ್ಯಾರ್ಥಿಗಳನ್ನು ತಯಾರು ಮಾಡುತ್ತದೆ. ಶಿಸ್ತಿಗೆ ಹೆಸರಾದ ಈ ಸಂಸ್ಥೆ ಮಾನಸಿಕ - ದೈಹಿಕವಾಗಿ ಮಕ್ಕಳನ್ನು ತಯಾರಿಸಿ - ಸರ್ವತೋಮುಖ ಬೆಳವಣಿಗೆ ನೀಡುವಲ್ಲಿ ಸಹಕಾರಿಯಾಗಿದೆ. ಇದರ ಬೆಳವಣಿಗೆಗೆ ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಬೇಕಾಗುವ ಎಲ್ಲಾ ಸಹಾಯ - ಸಹಕಾರ ನೀಡುವುದಾಗಿ ಈ ಸಂದರ್ಭದಲ್ಲಿ ತಿಳಿಸಿದರು. ಇನ್ನೋರ್ವ ಅತಿಥಿಗಳಾಗಿ ಆಗಮಿಸಿದ ಶ್ರೀ ಭರತ್ ಕುಮಾರ್, ಕಾರ್ಯದರ್ಶಿಗಳು, ಜೀವಿಸ್ ವಿದ್ಯಾ ಸಂಸ್ಥೆ, ಹೊಸಪೇಟೆ ಇವರು ಪ್ರಶಸ್ತಿ ಪತ್ರ ವಿತರಣೆ ಮಾಡಿ "ಸ್ಕೌಟಿಂಗ್ ಸ್ವಾವಲಂಬಿ ಕಲೆಯನ್ನು ಮಕ್ಕಳಿಗೆ ಕಲಿಸುತ್ತದೆ. ಇವರಲ್ಲಿ ಉತ್ತಮ ಜೀವನ ಕಲೆಯ ಅಂಶಗಳು ಇವೆ. ಅವುಗಳನ್ನು ವಿದ್ಯಾರ್ಥಿಗಳು ಜೀವನದಲ್ಲಿ ರೂಢಿಸಿ ಕೊಂಡರೆ ಉತ್ತಮವೆಂದು ಈ ಸಂದರ್ಭದಲ್ಲಿ ನುಡಿದರು. ಇನ್ನೋರ್ವ ಅತಿಥಿ ರಾಮುಪ್ಪ ಪುರ ಸಭಾ ಸದಸ್ಯರು, ಕಂಪ್ಲಿ ಉಪಸ್ಥಿತರಿದ್ದರು."

## ಚಿತ್ರದುರ್ಗ ಜಿಲ್ಲೆ ಸಾಮಾನ್ಯ ಮಾಹಿತಿ ಶಿಬಿರ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಚಿತ್ರದುರ್ಗ ವತಿಯಿಂದ ಚಿತ್ರದುರ್ಗ ತಾಲ್ಲೂಕು ಹಿರಿಯ ಪ್ರಾಥಮಿಕ ಶಾಲೆ ಮತ್ತು ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರ ಸಾಮಾನ್ಯ ಮಾಹಿತಿ ಶಿಬಿರವನ್ನು ಕ್ಷೇತ್ರದ ಶಾಸಕರಾದ ಶ್ರೀ ಜಿ.ಹೆಚ್. ತಿಪ್ಪಾರೆಡ್ಡಿಯವರು ಉದ್ಘಾಟಿಸಿದರು. ಚಿತ್ರದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಆಯುಕ್ತರು (ಸ್ಕೌಟ್ಸ್) ಶ್ರೀ ಸಿ.ಆರ್. ಮೊಹಮ್ಮದ್ ಜಹೀರುದ್ದೀನ್ ಹಾಗೂ ಜಿಲ್ಲಾ ಸಂಸ್ಥೆಯ ಇತರೆ ಪದಾಧಿಕಾರಿಗಳು ಹಾಜರಿದ್ದರು.



# ೮೪ ವರ್ಷ ತುಂಬಿದ
# ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಮಾಸಪತ್ರಿಕೆಗೆ
# ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಭಿನಂದನೆಗಳು



ದಿನಾಂಕ 17.01.2003 ರಿಂದ 19.01.2003ರ ವರೆಗೆ ಮಾಗಡಿ
ತಾಲ್ಲೂಕು ಕುದೂರಿನಲ್ಲಿ, ನಡೆದ

## "ಜಿಲ್ಲಾ ಕ್ಯಾಂಪೂರಿ"

(ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ ಮತ್ತು ಕಬ್ ಮತ್ತು ಬುಲ್ ಬುಲ್ ಉತ್ಸವ)

ವನ್ನು ಯಶಸ್ವಿಯಾಗಿ ನಡೆಸಿಕೊಟ್ಟ, ಕರ್ನಾಟಕ ರಾಜ್ಯದ ರೇಷ್ಮೆ ಮತ್ತು
ಜವಳಿ ಖಾತೆ ಸಚಿವರಾದ

## ಸನ್ಮಾನ್ಯ ಶ್ರೀ ಹೆಚ್.ಎಂ. ರೇವಣ್ಣನವರಿಗೆ

ಎಲ್ಲಾ ಸ್ಥಳೀಯ ಪೋಷಕ ಬಂಧುಗಳಿಗೆ ಪ್ರಾಯೋಜಕರಿಗೆ ಅಧಿಕಾರಿ ಬಳಗಕ್ಕೆ ಜಿಲ್ಲಾ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳಿಗೆ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳಿಗೆ, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕಾರ ನೀಡಿದ ಎಲ್ಲರಿಗೂ ಜಿಲ್ಲಾ ಸಂಸ್ಥೆಯ ಪರವಾಗಿ ಅನಂತ ಅಭಿನಂದನೆಗಳು

| | | |
|---|---|---|
| **ಶಿವನಂಜಪ್ಪ** | **ಸಿ.ವಿ. ವಸಂತಮಾಧವನ್** | **ದೊಡ್ಡಸಿದ್ದಪ್ಪ** |
| ಜಿಲ್ಲಾಕಾರ್ಯದರ್ಶಿ | **ಹೆಚ್. ಮಂಜುಳದೇವಿ** | ಜಿಲ್ಲಾ ಮುಖ್ಯ ಆಯುಕ್ತರು |
| ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ | ಜಿಲ್ಲಾ ಆಯುಕ್ತರುಗಳು | ಬೆಂಗಳೂರು (ಗ್ರಾ). ಜಿಲ್ಲೆ |

ಭಾರತ್ ಸ್ಕೌಟ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ
ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ
ರಾಜ್ಯ ಕಛೇರಿ : ಪ್ರೊ|| ಪಿ. ಶಿವಶಂಕರ್ ವೃತ್ತ, ಕೊಂಡಜ್ಜಿ ಬಸಪ್ಪ ರಸ್ತೆ, ಕೋಟೆ, ಬೆಂಗಳೂರು - 560 002.

## ಸಮುದಾಯ ಅಭಿವೃದ್ಧಿ ಶಿಬಿರ

ದಕ್ಷಿಣ ಕನ್ನಡ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಪಟಲಾಂ ನಾಯಕರ ತರಬೇತಿ ಶಿಬಿರ ಮತ್ತು ಸಮುದಾಯ ಅಭಿವೃದ್ಧಿ ಶಿಬಿರವು ಪಿಲಿಕುಳ ನಿಸರ್ಗಧಾಮದ ವಿಜ್ಞಾನ ಭವನ ಪರಿಸರದಲ್ಲಿ ಜರುಗಿತು, ದಕ್ಷಿಣ ಕನ್ನಡ ಜಿಲ್ಲಾ ಮುಖ್ಯ ಆಯುಕ್ತರಾದ ಐ.ಎ. ಕೈರನ್ನರವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಸಹೋದರ ದೇವರಾವ್ ಬೆಳ್ಳೆಯವರು ಉದ್ಘಾಟಿಸಿದರು.

ಶಿಬಿರದಲ್ಲಿ ಪರಿಸರ ಒಕ್ಕೂಟದ ಕಾರ್ಯಕರ್ತೆಯರಾದ ಶ್ರೀಮತಿ ಅಸುಂತಾ, ಆಶಾ, ಕುಮಾರಿ ಸುಪ್ರಿಯಾರವರು ಪರಿಸರ ಮಾಲಿನ್ಯ, ಪರಿಸರ ಸಂರಕ್ಷಣೆ, ಕಸದ ತೊಟ್ಟಿಯ ಬಳಕೆಯ ಬಗ್ಗೆ ಸ್ಕೌಟ್ಸ್ ಗೈಡ್ಸ್‌ಗಳಿಗೆ ಪ್ರಾತ್ಯಕ್ಷಿಕೆಯೊಂದಿಗೆ ಕಾರ್ಯಕ್ರಮ ನೀಡಿದರು. ಶಿಬಿರದಲ್ಲಿ ವಿಜ್ಞಾನ ಭವನದ ಪರಿಸರದಲ್ಲಿ ಸಮಾಜ ಸೇವೆಯನ್ನು ಮಾಡುವುದರೊಂದಿಗೆ ನಾಯಕತ್ವದ ಬಗ್ಗೆ ವಿಶೇಷ ತರಬೇತಿ ನೀಡಲಾಯಿತು. ಶಿಬಿರ ನಾಯಕಿಯಾಗಿ ಶ್ರೀಮತಿ ಜಯಂತಿಯವರು ಸಹಾಯಕರಾಗಿ ಶ್ರೀ ಹಸನ್ ಸಾಹೇಬ್‌ರವರು ಕಾರ್ಯನಿರ್ವಹಿಸಿದರು.

ಗೈಡ್ಸ್ ಜಿಲ್ಲಾ ಆಯುಕ್ತೆಯಾದ ಶ್ರೀಮತಿ ಐರಿನ್ ಡಿ ಕುನ್ಹಾರವರ ಅಧ್ಯಕ್ಷತೆಯಲ್ಲಿ ನಡೆದ ಸಮಾರೋಪ ಸಮಾರಂಭದಲ್ಲಿ ಸ್ಕೌಟ್ಸ್‌ಗಳ ಪರವಾಗಿ ಸನತ್ ಮತ್ತು ಗೈಡ್ಸ್‌ಗಳ ಪರವಾಗಿ ಸೌಜನ್ಯ ಶಿಬಿರದ ಅನುಭವಗಳನ್ನು ಹಂಚಿಕೊಂಡರು. ಶಿಬಿರದ ವರದಿಯನ್ನು ಹಸನ ಸಾಹೇಬ್‌ರವರು ಮಂಡಿಸಿದರು.

ಥಾಯ್‌ಲ್ಯಾಂಡ್‌ನಲ್ಲಿ ನಡೆಯಲಿರುವ ಅಂತರಾಷ್ಟ್ರೀಯ ಜಾಂಬೋರೇಟ್‌ನಲ್ಲಿ ಜಿಲ್ಲೆಯನ್ನು ಪ್ರತಿನಿಧಿಸುವ ಪುತ್ತೂರು ವಿವೇಕಾನಂದ ಪ್ರೌಢ ಶಾಲೆಯ ಸ್ಕೌಟ್‌ಗಳಾದ ಸಹೋದರ ಸನತ್ ಮತ್ತು ನಚೀಕೇತ್‌ರವರಿಗೆ ಶುಭ ಹಾರೈಸಲಾಯಿತು. ಗೈಡರ್ ಸಹೋದರಿ ಸುನಿತಾ ಸ್ವಾಗತಿಸಿ ಜಿಲ್ಲಾ ಸಂಘಟನಾ ಆಯುಕ್ತರಾದ ಕೆ.ಎಂ.ಕೆ. ಮಂಜನಾಡಿ ವಂದಿಸಿದರು.

ಪುತ್ತೂರಿನ ವಿವೇಕಾನಂದ ಪ್ರೌಢಶಾಲೆ, ರಾಮಕೃಷ್ಣ ಹೆಣ್ಣು ಮಕ್ಕಳ ಪ್ರೌಢಶಾಲೆ, ಮಂಗಳೂರಿನ ಎಂ.ಆರ್.ಪಿ.ಎಲ್. ಶಾಲೆ, ಸುರತ್ಕಲ್ ವಿದ್ಯಾದಾಯಿನಿ ಪ್ರೌಢಶಾಲೆ, ಉಳ್ಳಾಲದ ಬಿ.ಎಂ. ಪ್ರೌಢಶಾಲೆ, ಟಿಪ್ಪು ಸುಲ್ತಾನ್ ಪ್ರೌಢಶಾಲೆ ಸ್ಕೌಟ್ ಮತ್ತು ಗೈಡ್‌ಗಳು ಭಾಗವಹಿಸಿದ್ದರು.

# ರಾಜ್ಯ ಮಟ್ಟದ ರೋವರ್ಸ್, ರೇಂಜರ್ಸ್‌ಗಳ ಚಾರಣ ಶಿಬಿರ

ದಿನಾಂಕ : 15.12.2002 ರಿಂದ 19.12.2002ರ ವರೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾರೋಹಳ್ಳಿಯಲ್ಲಿ ರಾಜ್ಯಮಟ್ಟದ ರೋವರ್ಸ್ ರೇಂಜರ್ಸ್‌ಗಳ ಚಾರಣ ಶಿಬಿರ ನಡೆಯಿತು. ರಾಜ್ಯದ ವಿವಿಧ ಜಿಲ್ಲೆಗಳಿಂದ 40 ರೋವರ್ಸ್, 20 ರೇಂಜರ್ಸ್, 10 ಸಿಬ್ಬಂದಿ ಒಟ್ಟು 70 ಜನ ಈ ಶಿಬಿರದಲ್ಲಿ ಭಾಗವಹಿಸಿದ್ದು ಶ್ರೀ ಎ.ಎಂ. ಶಂಕರ್ ಎ.ಎಲ್.ಟಿ.(ಆರ್) ಮಿಸ್ ಎನ್.ಕೆ. ಛಾಯ ಎಲ್.ಟಿ.(ಜಿ) ನಾಯಕರುಗಳಾಗಿದ್ದರು. ರೋವರ್ಸ್ ರೇಂಜರ್ಸ್‌ಗಳು ಪ್ರತಿದಿನ ಸುತ್ತಮುತ್ತಲಿನ ಪ್ರದೇಶಗಳಿಗೆ ಭೇಟಿ ನೀಡಿ ಪರಿಸರ ಅಧ್ಯಯನ ಮಾಡಿದರು. ಮೇಕೆ ದಾಟುವಿಗೂ ಕೂಡ ಪರಿಸರ ಅಧ್ಯಯನಕ್ಕಾಗಿ ಭೇಟಿ ನೀಡಿ ಹಾಗೂ ಹಾರೋಹಳ್ಳಿಯ ಶಾಲಾ ಕಾಲೇಜುಗಳ ಆವರಣ ರಸ್ತೆ, ಸ್ವಚ್ಛತಾ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

ದಿನಾಂಕ 18.12.2002 ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಅಧ್ಯಕ್ಷತೆಯನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ವಹಿಸಿದ್ದು ರೋವರ್ಸ್ ರೇಂಜರ್ಸ್‌ಗಳಿಗೆ ಶುಭ ಕೋರಿದರು ಹಾಗೂ ಮೆಚ್ಚುಗೆ ವ್ಯಕ್ತಪಡಿಸಿದರು. ರಾಜ್ಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀ ಶಿವನಂಜಪ್ಪ ಜಿಲ್ಲಾ ಕಾರ್ಯದರ್ಶಿ ಇವರು ಶಿಬಿರಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಗಳನ್ನು ಮಾಡಿದರು.



## ● GONE HOME ●

## B. MANJUNATH
## Leader Trainer (Scouts)

Sri B. Manjunath Jagalur, Teacher, Leader Trainer (Scouts) and Former District Training Commissioner (Scouts) Davanagere District and member of the State Council BS&G, Karnataka passed away on 6th January 2003 at Chikkabantanahalli in Jagalur Taluk at the age of 55 after brief illness.

He served the Movement as one of the active committed Volenteer for three Decades and actively participated in a number of Local, State and National level camps and conducted Training Courses for Unit leaders. He is the son of Sri. B. Basappa Retired Tahasildar. He leaves behind his wife, two sons, three danghters and host of relatives and admirers.

**MAY HIS SOUL REST IN PEACE**

# 20th World Scout Jamboree Concluded 24,000 Scouts Participated Representing 153 Countries at Thailand




KS & G NEWS SERVICE

## SAWASDEE

The World " Sawasdee" means "Greeting" in Thai.

The 20th World Scouts Jamboree held at Hadyaco, Sattahip, Chonburi about 153 Kms South of Bangkok, on the east coast of the Gulf of Thailand from 28th December 02 to 7th January 2003 has concluded successfully.

24,000 Scouts, representing their National Organizations of 153 Countries around the World participated and exchanged different cultures and traditions to create Peace, Harmony and Friendship. They spent 12 days Camping together and attended interesting activities designed for their self development and social responsibility.

## 259 Members from India attended the Jamboree

## CAMP LIFE

During the Jamboree, participants were camped in Sub camps. Troops from the same contingent were spread amongst several Sub camps. The village was divided in to six sub camps and the four villages were divided in to 24 sub camps. Each sub camps has 17 to 18 Troops of different countries.

The Sub-camp is not simply where participants sleep. It is where they live, meet other, develop and take part in a variety of activities and meaningful moments. Each Sub-camp will have its own rhythm, activities and style. Each Troop contributed to create a Sub-camp spirit.

## 14 Members from Karnataka Participated

Sri. Kondajji B. Shanmukhappa, State Chief Commissioner of our State was the Deputy Contingent Leader of Indian Contingent. Sri Chinnswamy Reddy, State Secretary and Sri. M.K. Khan, State Council Member, were the Sub Camp coordinators. Sri. R.D. Murthy, State Council Member was the Staff of the Cataring Wing Sri. Balesh Sasalatti, District Secretary, Belgum, Porf R.N. Jadhav, Asst. Dist, Commissioner (Scout), Sri V.A. Satapute Secretary LA, Gokak Sri. Riyaz Pasha, S.M. Avishek, Suhail Syed, Ashwin Rajan, Sanath Krishna, Nachiketha K, Nikhil V. D'Souza Scouts participated in the World Jamboree from Karnataka.



National Commissioner Sri. L.M. Jain, participated in the "INDIA DAY" Celebrated on 4.1.2003 at 20th World Scout Jamboree Grounds, Chonburi, Thailand. Sri. D.L. Sharma, Jt, Director (S), Smt. K. Namchoom, S.C.C. Arunachal Pradesh, Sri Kondajji B. Shanmukhappa S.C.C. Karnataka, Sri. Shyamal K. Biswas, S.C.C. West Bengal and Smt Pushpa Nadkarni, Jt. Director (SS) and others are seen.



ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿಜಯಪುರದ ಎವರ್ ಗ್ರೀನ್ ಪ್ರೌಢಶಾಲೆಯ ಶಾಲಾ ಮಹೋತ್ಸವವನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ದಿನಾಂಕ 12-12-2002 ರಂದು ಉದ್ಘಾಟಿಸಿದರು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿಯಾದ ಶ್ರೀಮತಿ ಆರ್ ಸಾವಿತ್ರಿ ಹಾಗೂ ಕಾರ್ಯದರ್ಶಿಯಾದ ಶ್ರೀ ರಾಜೇಂದ್ರಬಾಬುರವರನ್ನು ಚಿತ್ರದಲ್ಲಿ ಕಾಣಬಹುದು.



ದಿನಾಂಕ 26.12.2002 ರಂದು ಬೈರೋಹಳ್ಳಿ, ಕೆಂಗೇರಿಯ ಕೃಷ್ಣ ಚೈತನ್ಯ ಬುದ್ಧಿಮಾಂದ್ಯ ಶಾಲೆಯ ಮಕ್ಕಳಿಗೆ ನಗರದ ಸೆಂಟ್ ತೆರೇಸಾ ಶಾಲೆಯ ಗೈಡ್ ಮಕ್ಕಳಿಂದ ಆಹಾರ ವಿತರಣೆಯ ಸಹಕಾರ.



ಪ್ರಾಣಿಗಳಿಗೆ ಪ್ರೀತಿ ತೋರುವ ಗೈಡ್‌ಗಳು

# THE BHARAT SCOUTS & GUIDES, KARNATAKA

## Observance of State / National / International Days - 2003

| Month and Date | | Celebration of Days |
|---|---|---|
| January | 12 | National Youth Day |
| | 26 | Republic Day |
| | 30 | Anti Leprosy Day |
| February | 22 | Founder's Day / Thinking Day |
| March | 8 | International Women's Day |
| April | 7 | World Health Day |
| | 22 | Earth Day |
| June | 5 | World Environment Day |
| | 26 | International Day against Drug Abuse and Illicit Trafficking |
| | 30 | World Forest Day |
| July | 11 | World Population Day |
| August | 15 | Independence Day |
| | 20 | Sadbhawana Divas |
| September | 5 | Teachers' Day |
| | 8 | World Literacy Day |
| | 16 | International Day of Peace |
| October | 1 | International Day of Elderly |
| | 2 | Gandhi Jayanthi |
| | 6 | World Habitat Day |
| | 8 | International Day of National Disaster Reduction |
| | 18 & 19 | Jamboree - on - the - Air (JOTA) |
| November | 1 | Kannada Rajyothsava Day |
| | 7 | BS&G Foundation Day / Flag Day |
| December | 1 | World Aids Day |
| | 3 | International Day of Persons with Disability |
| | 10 | Human Rights Day |

**PLEASE OBSERVE THESE DAYS AT YOUR LEVEL INVOLVING SCOUTS AND GUIDES**



100 2007

A Hundred years of Promise
in 2007, Scouting will celebrate its Centenary

I have very sweet memories of my association with the Bharat Scouts & Guides of Mysore. The Scout Movement is basically meant to build up character and to train us that we become fit citizens to bear the burdens of a democratic society not only in our own country but also of the world.

- S. NIJALINGAPPA

**CENTENARY CELEBRATION YEAR OF S. NIJALINGAPPA**

Regd as News Paper (Magazine) No : **CPMG/KA/BGW-549/2002-05**



ಕರ್ನಾಟಕ
ಸ್ಕೌಟ್ ಮತ್ತು ಗೈಡ್
KARNATAKA SCOUT & GUIDE
News Magazine

BOOK-POST

If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002

***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.